# ಬಾಳ ಗೆಳತಿ

[ಶೃಂಗಾರ ಕವನಗಳು]

ಅಮ್ಮೆಂಬಳ ಶಂಕರನಾರಾಯಣ ನಾವಡ

ಪರಾಮರ್ಶೆಗಾಗಿ

೧೯೫೬

ವ್ಯಂಜಲಿ ಗ್ರಂಥಮಾಲೆ,
ಕೋಟೆಕಾರು.

8K1.6
NAV6

ಾಹಿತ್ಯಾಂಜಲಿ ಗ್ರಂಥಮಾಲೆ ಪುಷ್ಪ ೯.

# ಬಾಳ ಗೆಳತಿ

[ಶೃಂಗಾರ ಕವನಗಳು]

ಅಮ್ಮೆಂಬಳ ಶಂಕರನಾರಾಯಣ ನಾವಡ,
ಆನಂದಾಶ್ರಮ ಹೈಸ್ಕೂಲ್, ಉಳ್ಳಾಲ.

೧೯೫೬

ಸಾಹಿತ್ಯಾಂಜಲಿ ಗ್ರಂಥಮಾಲೆ,
ಆನಂದಾಶ್ರಮ,
ಕೋಟೆಕಾರ್, ದಕ್ಷಿಣ ಕನ್ನಡ.

# ಅಭಿಪ್ರಾಯ

"....ನನಗೆ ವಿಶೇಷವಾಗಿ ಅವರ (ಶ್ರೀ. ಅಮ್ಮೆಂಬಳ ಶಂಕರ ನಾರಾಯಣರ) ಶೃಂಗಾರಾತ್ಮಕ ಕವನಗಳು ಪ್ರಿಯವಾಗಿ ತೋರಿದುವು...."

ದ. ರಾ. ಬೇಂದ್ರೆ.

['ಸರ'ದ ಮುನ್ನುಡಿಯಲ್ಲಿ.]

Ⓡ 092178

# ಕವನಗಳ ವಿವರ

ಹೆಸರು ಪುಟ





# ಪ್ರೇಮಾಂಜಲಿ

ಪ್ರಖ್ಯಾತನಾದ ಪಾಶ್ಚಾತ್ಯ ದಾರ್ಶನಿಕ ಶೊಪೆನ್‌ಹವರ್‌ಗೆ ಸ್ತ್ರೀಯರ ವಿಷಯದಲ್ಲಿ ಗೌರವಭಾವವಿರಲಿಲ್ಲ. ಆತನ ದೃಷ್ಟಿಯಲ್ಲಿ, ಪ್ರತ್ಯುತ್ಪಾದನೆಯ ಒಂದೇ ಕೆಲಸಕ್ಕೋಸ್ಕರ ಪ್ರಕೃತಿಯಿಂದ ನಿಯೋಜಿತಳಾದ ಮಾಟಗಾತಿ—ಹೆಣ್ಣು. ಸಂಸಾರ ರಥದ ಎರಡು ಗಾಲಿಗಳು ಗಂಡು-ಹೆಣ್ಣು, ಎಂಬುದನ್ನು ಆತ ಒಪ್ಪಿದವನಲ್ಲ. ಬದುಕನ್ನು ಹಸನುಗೊಳಿಸುವ ಮಹಾಕಾರ್ಯದಲ್ಲಿ ಸ್ತ್ರೀಗೆ ಸ್ಥಾನವಿಲ್ಲ, ಅಷ್ಟೇ ಅಲ್ಲ; ಬದುಕಿನ ಸಹಸ್ರ ಜಂಜಡಗಳಿಗೆ ಆಕೆಯೇ ಕಾರಣಳು—ಎಂಬುದು ಅವನ ಅಭಿಪ್ರಾಯವಾಗಿತ್ತು.

ಶೊಪೆನ್‌ಹವರನ ಜೀವನ ಕಥೆಯನ್ನು ತಿಳಿದವರಿಗೆ, ಅವನ ತತ್ವಜ್ಞಾನ ವಿಚಿತ್ರವಾಗಿ ತೋರಲಾರದು. ಆತನದು, ತಾಯಿಯ ಒಲವನ್ನೆ ಕಂಡರಿಯದ ಗಂಡುಜೀವ. ಪ್ರೇಮಪ್ರಕರಣವಂತೂ ಬದುಕಿನ ಕಹಿ ನೆನಪು. ಮುಪ್ಪಿನ ವರೆಗೂ ಆತ ಬಾಳಿದುದು ಒಂಟಿಯಾಗಿಯೇ. ಅಂತಹ ಮನುಷ್ಯ, ಹೆಣ್ಣನ್ನು ಕ್ಷುದ್ರಜೀವಿಯಾಗಿ ಕಂಡುದು ಸ್ವಾಭಾವಿಕವೇ ಸರಿ.

ಆದರೆ ಲೋಕದ ಸಾಹಿತ್ಯೇತಿಹಾಸ ನಮಗೆ ತೋರಿಸಿಕೊಡುವುದೇ ನನ್ನು? ಅನುಕೂಲೆಯಾದ ಬಾಳಗೆಳತಿ, ಬರೆಹಗಾರನ ಲೇಖನಿಗೆ ನಿತ್ಯ ಚೇತನವನ್ನು ನೀಡಬಲ್ಲ ಸಮರ್ಥೆ. ಶತ ಶತಮಾನಗಳ ಕಥೆ ಈ ಮಾತು ಸತ್ಯವೆಂಬುದನ್ನು ಸಿದ್ಧಪಡಿಸಿಕೊಟ್ಟಿದೆ. ಸಾಹಿತ್ಯಕ್ಕೆ ವಸ್ತುವಾಗಿರುವ ವೈವಿಧ್ಯ ಪೂರ್ಣ ಬದುಕಿನಲ್ಲಿ ಹೆಣ್ಣಿನ ಒಲವೂ ಪ್ರಮುಖವಾದುದೇ. ಪ್ರೇಮ ಎಷ್ಟೊಂದು ಸಾಹಿತ್ಯಕೃತಿಗಳಿಗೆ ವಿಷಯವಾಗಿಲ್ಲ! ಪ್ರೇಯಸಿ—ಬದುಕಿನ ಜತೆಗಾತಿ—ಎಷ್ಟೊಂದು ಸಾಹಿತ್ಯಸೃಷ್ಟಿಗೆ ಕಾರಣಳಾಗಿಲ್ಲ!

ಪಶ್ಚಿಮತೀರ ಕನ್ನಡನಾಡಿಗೆ ನೀಡಿರುವ ಪ್ರಮುಖ ಕವಿ ಅಮ್ಮೆಂಬಳ ಶಂಕರನಾರಾಯಣರು, ದಾರ್ಶನಿಕ ಶೊಪೆನ್ ಹವರನ ಜಾಡು ಹಿಡಿದವರಲ್ಲ. ಕಾರಣವಿಷ್ಟೆ: ಅವರ ಹೃದಯ, ಒಲವಿನ ಜಲ ಒಸರದ ಬೆಂಗಾಡಲ್ಲ; ಅದು, ನೂರಾರು ವರ್ಣರಂಜಿತ ಕಾರಂಜಿಗಳು ಚಿಮ್ಮುತ್ತಲೇ ಇರುವ ಬೃಂದಾವನ.

'ನನ್ನ ನಿನ್ನ ಪ್ರೇಮದೀಪ ಒಲವಿನಾರತಿ ಬೆಳಗಲೆ'ಂದು ಹಾರೈಸು
ಕವಿಗೆ ಹೀಗೆ ತೋರುತ್ತಿದೆ.

ದೇವದೇವನರ್ಥವಿಹುದು
ಪ್ರೇಮಭಾವ ರೀತಿಯು
ಜೀವ ಜೀವ ಸಾಮರಸ್ಯ-
ವೊಂದೆ ಪ್ರೀತಿ ನೀತಿಯು

ತನ್ನಾಕೆಯನ್ನು ಕುರಿತು ಕವಿಗೆ ಹೀಗೆನ್ನಿಸುತ್ತದೆ:

ಜೌವನದ ಬಟ್ಟಲಲಿ ಪ್ರೇಮಸುಧೆಯನ್ನೆರೆದು
ಕುಡಿಸುತಿಹ ನನ್ನಾಕೆಯಿರೆ ಸಗ್ಗವೇಕೆ?
ಜೀವಮಧುಕರನವಳ ಮುಖಕಮಲದಿಂದೊಲಿದು
ಸೌಂದರ್ಯ ಮಧುವೀಂಟುತಿರೆ ಬೊಮ್ಮ ಬೇಕೆ?

ಆಕೆಯ ಇದಿರಲ್ಲಿ 'ಬೇರೆ ಬ್ರಹ್ಮಾನಂದಕೆಲ್ಲ ಸೋಲು' ಎಂದು ಭಾ
ಸುವ ಕವಿಗೆ ಹೀಗೆ ಭಾಸವಾಗುತ್ತದೆ.

'ಬಡತನದಿ ಬೆತೆಯಿಲ್ಲ; ಬಾಳಿನಲಿ ಬೆಳಕುಂಟು;
ಎರಡು ಜೀವಗಳೈಕ್ಯವಾದ ಬೆಸುಗೆಯುಲಿ
ಒಡವೆರೆದ ನಲ್ಮೆಯಲಿ ನೈಜ ಸುಖಮುಖವುಂಟು-'
ಎಂಬ ಭಾವದ ಬೋಧೆಯರಿತೆನಾಕೆಯಲಿ.

ಮಡದಿ ತವರುಮನೆಗೆ ಹೋದಳೆಂದರೆ ಕವಿಗೆ ಸಂಕಟ. ಹೆ
ಹೆಜ್ಜೆಗೂ ಆಕೆಯ ನೆನಪು. ಎಂದು ಬರುವಳೋ ಎಂಬ ಕಾತರ. 'ಯಾ
ಕಜ್ಜವ ಗೈಯಹೋದರು ನಿನ್ನ ನೆನಪೇ ಸುಳಿವುದು'.

ಬಳ್ಳಿಯಲಿ ಮಲರಿರುವ ಹೂಗಳ
ಚೆಲುವಿಕೆಯ ದಿಟ್ಟಿಸುತಿರೆ
ನಿನ್ನ ನಗೆಗಣ್ಣುಗಳು ಬಗೆಯಿದಿ-
ರಲ್ಲಿ ಕುಣಿವಂತೆನಿಪುದು.

ನಲ್ಲೆ ಇಂದು ಮರಳಿ ಬರುವಳೆಂಬುದನ್ನು ತಿಳಿದಾಗಲಂತೂ ಅ
ಪರಮ ಸುಖಿ.

ಇಂದೋಪಳೈತಂದು ಪ್ರೇಮ ಪ್ರವಾಹದಲಿ
ಆನಂದ ಜಲದಿಂದ ಮೀಯಿಸುವಳು
ತೋಳುಗಳ ಹೂಸರಗಳಿಂದೆನ್ನ ಸೆರೆವಿಡಿದು
ಸವಿಮುತ್ತುಗಳ ಮಾಲೆ ತೊಡಿಸಲಿಹಳು

ಮಾನಿನಿ ಕೋಪಿಸಿಕೊಂಡ ದಿನವಂತೂ ಕವಿಯ ಕಂಠದಿಂದ ಹೊರ ಹೊಮ್ಮುವುದು ತುಂಟತನದ ಹಾಡು. 'ಸಿಟ್ಟಾಗ ಬೇಡ. ಹಲ್ಲಿಪ್ಪಾಗಲೆ ಹಾರಿ ನಲೆ. ಮುದಿತನದಿ ಎಲ್ಲಿಯ ಸಂತೋಷ?' ಎನ್ನುತ್ತಾರೆ.

ಇನ್ನೇಕೆ ಹುಬ್ಬಿನ ಬಳ್ಳಿಯೊಳಾ ಕೊಂಕು?
ಕಣ್ಣಿನ ಕಡೆಯಲಿ ಕಡುಗೆಂಪು?
ತುಟಿಯುದುರುವುದೇಕೆ? ಮೂಗರಳುವುದೇಕೆ?
ಮೂಡಿ ಬರಲಿ ಬಿಳಿನಗೆಯಿಂಪು.

ಕೋಟ್ಯನುಕೋಟಿ ಸಂಸಾರಗಳಲ್ಲಿ ನಾವು ಕಾಣುವ ಚಿತ್ರ: 'ಸುಖವಿಲ್ಲ' ಹೆಂಡತಿಯ ಮಾತು] ಈಡೇರದ ಬಯಕೆಗಳನ್ನು ಕುರಿತು, ಸುಖಿಗಳೆಂದು ತನಗೆ ಕಾಣಿಸಿದ ಓರಗೆಯವರತ್ತ ನೆರೆಹೊರೆಯವರತ್ತ ಬೊಟ್ಟುಮಾಡಿ, ದುರುವ ಧ್ವನಿಯಿಂದ ಮಾತನಾಡದ ಹೆಣ್ಣು ಪ್ರಾಯಶಃ ಇರಲಾರಳು. ಕೆಯ ಮಾತುಗಳೇ ಈ ಕವಿತೆ. ಹೆಚ್ಚಿನ ಮನೆಗಳಲ್ಲೆಲ್ಲ ಕೇಳಿಬರುವ ನಿತ್ಯ ಮಂತ್ರ ನಿಜ. ಆದರೆ, ಕವಿಯ ಜಾಣ್ಮೆಯ ಫಲವಾಗಿ ಆ ಮಂತ್ರವಿಲ್ಲಿ ಜೀವ ತಳೆದಿದೆ; ರಸಪೂರ್ಣ ಗೀತವಾಗಿದೆ.

ಹೆಣ್ಣಿನ ಆ ಹಾಡಿಗೆ ಗಂಡಿನ–ಗಂಡನ–ಉತ್ತರ: 'ಸುಖವುಂಟು'. ಅಣ ಕಿಸುವ, ರಮಿಸುವ, ವಾದಿಸುವ ಆ ಧ್ವನಿ ಅಪೂರ್ವವಾದುದು.

ಮುಗುದೆ! ಮೋಹನೆ! ನಲ್ಲೆ! ನಿನ್ನ ಮಾತನು ಕೇಳಿ
ನಗುವುಕ್ಕಿ ತುಟಿಮಿಕ್ಕಿ ಬರುತಿರುವುದು

—ಶಕುಂತಲೆ ನಾರ ಬಟ್ಟೆಯನ್ನುಟ್ಟು ದುಷ್ಯಂತನಿಗೆ ಚೆಲುವನೀಯ ಲಿಲ್ಲವೆ? ಲೋಹ ಹೊರೆಯಲ್ಲವೆ? ಸೀತೆ—ಪಾಂಚಾಲೆಯರಿಗಿದ್ದುವೇ ತೊಡ ವುಗಳು ಕಾಡಿನಲೆದಾಟದಲಿ?

ಬಾಹ್ಯ ವಸ್ತುಗಳಲ್ಲಿ ಸುಖ ಹುದುಗಿಕೊಂಡಿಲ್ಲ
ಮನದ ಮರೆಯಲಿ ಮನೆಯ ಮಾಡಿರುವುದು
ಆಸೆ ಮುಗಿಲುಗಳೋಳಿ ತೀವ್ರ ಗಾಳಿಗೆ ಚೆದರೆ
ತೃಪ್ತಿನಭದಲಿ ಸೊಗದ ನೇಸರೆಸೆಯುವುದು

ಹೀಗೂ ಮಾನಿನಿ ಕೈಹಿಡಿದಾಕೆಯನ್ನು ಸಂತಸಪಡಿಸಬಲ್ಲ ಕವಿ ಧನ್ಯನೆ! ಸ
ಇನಿಯಳನ್ನು ನೋಡುತ್ತ ಹೀಗೆನಿಸುತ್ತದೆ ಕವಿಗೆ:

ನಾನು ಕಂಡಿರುವ ಚೆಲುಬಾಲೆಯರ ಸೌಂದರ್ಯ
ಸಾರ ಸರ್ವಸ್ವದಂತಿವಳೆಸೆಯುತಿಹಳು.
ಕಣ್ ಮನಕೆ ಸ್ನೇಹರಸದೊಸರ ಸೇಚಿಸುತಿವಳು
ತಂಗದಿರನಂತೆ ತಂಪೀಯುತಿಹಳು

ಆತನ ಪಾಲಿಗೆ—

ನಲ್ಲೆಯು ನಗುಮೊಗ ಬಳಿಯಲ್ಲಿದ್ದರೆ
ಮನೆಯೆಲ್ಲಾ ಬೆಳಗು

ಪ್ರಿಯ ರಸಿಕನ ಪ್ರಿಯದರ್ಶಿನಿಯೊಬ್ಬಳು, ಹೊಗಳಿಕೆಯನ್ನು ಕೇಳ
ಮುನಿಸನ್ನು ಬಿಟ್ಟುಕೊಟ್ಟಳು.

ನಸುಮುನಿಸಿನ ಪ್ರಣಯಾನ್ವಿತೆ
ಲಜ್ಜಾತುರೆ ಮುಗ್ಧೆ
ಒಯ್ಯಾರದಿ ಪಿಸುನುಡಿಯುತೆ
ಒಲಿದಳು ಸುಸ್ನಿಗ್ಧೆ

ಮತ್ತದಿನ್ನೊಮ್ಮೆ ಕಾಹಿಲೆಯಿಂದ ನರಳುವಾಗ ಈ ಕವಿ ಅಪಾರವಾ
ವೇದನೆಯನ್ನು ಅನುಭವಿಸುತ್ತಾರೆ. 'ಮರುಗದಿರು ಮಾನದನ್ನೆ! ಸ್ವಸ್ಥ
ಚಿನ್ನೆ!' ಎಂದು ಆಕೆಯನ್ನು ಸಂತೈಸುತ್ತಾರೆ.

ಬಾಳಿನಾಗಸವೊಮ್ಮೆ ಶುಭ್ರವಿರಬಹುದು
ಮುಗುದೊಮ್ಮೆ ನರಳಿಕೆಯ ಕಾರ್ಮೋಡ ಬಹುದು
ಎರಡನೊಂದೇ ರೀತಿ ತಿಳಿವ ಸಮಚಿತ್ತ
ಸಂಸಾರದಲಿ ತುಂಬಬೇಕಾದ ತತ್ವ

ಸಂಕಟದ ಕಾಲಾವಧಿ ಬೇಗನೆ ಕಳೆಯಲೆಂಬುದೇ ಆತನ ಹಾರೈಕೆ.

ನಮ್ಮ ದಾಂಪತ್ಯದ ಕನ್ನಡಿಯು ತೊಳಗಿ
ಸವಿಸೊಗದ ಬಾಳ್ಬೆಳಗು ಬೇಗನೇ ಬೆಳಗಿ
ಬರಲಿರುವುದೆನ್ನುವಾಶಾವಾದವೆಮಗೆ
ದಾರಿ ತೋರಲಿ ಮುಂದೆ ಧ್ರುವ ತಾರೆಯಾಗಿ

ನಲುಮೆಯ ನಲ್ಲನನ್ನು ಕುರಿತು ನಲ್ಲೆ ತೋರುವ ಪ್ರೀತಿಯೂ ಅಗಾಧವಾದುದು. 'ಪ್ರೇಮದ ಬೆಳೆಯನು ಬಾಳಿನ ಬಯಲಲಿ ಬೆಳೆಯೋಣ', ಎಂದು ಆಕೆ ಆತನಿಗೆ ಆಹ್ವಾನವೀಯುತ್ತಾಳೆ.

ಬಾಳಿನ ಬಳ್ಳಿಗೆ ಬಳಿ ಹೂ ಮೂಡಲಿ
ಮೂಡಿದ ಹೂವಿಗೆ ಹಣ್ಣಿರಲಿ
ಹಣ್ಣಿನ ಬೆಳೆಯಲಿ ಭಾವೀ ಜೀವನ
ಧನ್ಯತೆ ಪಡೆಯಲಿ ಹದುಳದಲಿ

—ಎನ್ನುವುದು ಆಕೆಯ ಆಶಯ.

ಎರಡು ಚಿತ್ತಗಳ, ಜೀವಗಳ, ಬೆಸುಗೆಯನ್ನು ಸಾಧಿಸಿದ ಕವಿ, ತನ್ನ ಕುಸುರಿನ ಕುಂಚದಿಂದ ಹೆಣ್ಣಿನ ಸೂಕ್ಷ್ಮ ಭಾವನೆಗಳನ್ನು ಎಳೆಎಳೆಯಾಗಿ ಚಿತ್ರಿಸಲು ಸಹಜವಾಗಿಯೇ ಸಮರ್ಥ.

ತೋಳ ತಕ್ಕೆಯ ತೆರವು ಕಾದಿದೆ
ನಲ್ಲನಪ್ಪುಗೆಗೆ
ಮಿರುಗು ಕೆನ್ನೆಯು ನುಣುಪುಗೊಂಡಿದೆ
ಮುತ್ತಿಸೊತ್ತಿಗೆಗೆ
ಕಣ್ಣನೀರನು ಕರೆವುದೊಂದೇ
ನನ್ನ ಪಾಲಿಗೆ ಬಂದುದಿಂದೇ
ನಲ್ಲನಿಲ್ಲದೆ ಶೂನ್ಯವಾಗಿದೆ
ನನ್ನ ಹೃದಯವಿದು
ಮೆಲ್ಲಮೆಲ್ಲನೆ ಸಮಯ ಸರಿವುದು
ದುಃಖರಾತ್ರಿಯಿದು.

—ಪತಿ ಬರದೇ ಇದ್ದ ರಾತ್ರೆ ಸತಿ ಹಾಗೆ ಹಲುಬಿದಳು.

ಈ ಸಾಲುಗಳನ್ನೋದಿದಾಗ ನೆನಪಿಗೆ ಬರುವ ಒಬ್ಬ ವ್ಯಕ್ತಿ ಅಮರುಕ. ಗತಕಾಲದ ಆ ಶೃಂಗಾರ ಕವಿ ಸಾರ್ವಭೌಮ ಅಪ್ರತಿಮವೆನಿಸುವ ಪ್ರೇಮ ಮುಕ್ತಕಗಳನ್ನು ರಚಿಸಿದ. ಆತನ ಕೃತಿಗಳು, ಪ್ರಾಚೀನ ಸಂಸ್ಕೃತ ಸಾಹಿತ್ಯದ ಹೆಮ್ಮೆ. ಅಂತೆಯೇ ಕನ್ನಡಿಗಗಾದ ನಮ್ಮ ಹೆಮ್ಮೆ ಕವಿ ಅಮ್ಮೆಂಬಳರ 'ದುಃಖರಾತ್ರಿ'.

ಒಳ್ಳೆಯ ಇನ್ನೊಂದು ಕವಿತೆ: 'ಪ್ರೇಮಾಂಜಲಿ.'

ಕೆಲವು ಸುಮಗಳ ಕೋದು ಸರವ ಸುರಿದಿಹೆನಿಂದು
ಗೆಲವಿನೊಲವಿನ ಕಾಣ್ಕೆಯಿದನು ನೀನು
ಕೊಳ್ಳು ಬೇಗನೆ ಬಂದು, ಕೊಳ್ಳದಿರಲಾ ಮಾಲೆ
ಕಳೆಗುಂದಿ ಕೊರಕೊರಗಿ ಸೊರಗದೇನು?

ಈ ಪ್ರೇಮಾಂಜಲಿಯ ಅರ್ಪಣೆಯ ಬೆಳಕ 'ಮಗು'

ಸತಿ–ಪತಿಯರೆದೆಯೊಲವಿನೊಂದು ತಿಳಿನೀರಿಂದ
ಬೆಳೆದೆರಡು ಬಾಳ್ ಬಳ್ಳಿಗೊಂದು ಸಿರಿಹೂವು

ದಾಂಪತ್ಯ ಜೀವನ ಸಾರ್ಥಕವಾಯಿತೆನ್ನುತ್ತಾ ಕವಿ ಹೇಳುತ್ತಾರೆ:

ಶೃಂಗಾರ ಕವನಗಳಿಗವಳೆ ಸ್ಫೂರ್ತಿಯು ಬುಗ್ಗೆ,
ಎಂದೊಪ್ಪಿಕೊಂಡರೇಂ ನಗುವಿಗಡೆ ಬಂತೆ!

ಇಂತಹ ಸೊಗಸಾದ ಕವಿತಾಪುಷ್ಪಗಳ ಹಾರದ ಸಮರ್ಪಣ[illegible]
ಯೋಗ್ಯವಾದುದು. ಹೀಗಿವೆ, ಸಂಕಲನದ ಕೊನೆಯ ಪುಟದ ಸಾಲುಗಳ[illegible]

ತುಂಬಿದೊಲವಿನ ಭರದಿ ಬಾಳ್ವೆಯ
ಮಡಿಲೊಳೊಬ್ಬರನೊಬ್ಬರು
ತಿಳಿದುಕೊಳ್ಳುತ, ಸಹನೆಯಿಂದಲಿ
ಸಾಮರಸ್ಯವ ಸಾಧಿಸಿ,
ಬೆರೆತ ದಂಪತಿಗಳಿಗೆ ಸನ್ನೀ
ಪುಟ್ಟ ಕೃತಿಯು ಸಮರ್ಪಣ
ಪ್ರೇಮ–ತೃಪ್ತಿಯ, ಶಾಂತಿ–ಸೌಖ್ಯದ
ಪ್ರೇಮಿಗಳಿಗಿದು ದರ್ಪಣ

ಈ ರೀತಿಯ ಚೆಲೆಬಾಳುವ ಸಂಕಲನವಾದ 'ಬಾಳಗೆಳತಿ'ಯನ[illegible] ಓದುವುದೊಂದು ಸೊಗಸು. ಓದಿ ಸಂತೋಷಪಡುವುದೊಂದು ಹಬ[illegible] ಅವರ ಪದಗಳ ಆಯ್ಕೆ, ಉದ್ಯಾನದಿಂದ ವಿವಿಧ ಹೂಗಳನ್ನು ಆ[illegible] ಅನುಗೊಳಿಸಿ, ಪೋಣಿಸಿದ ಹಾಗೆ. ನಯ್ಯ್ರಯ ಲಾಲಿತ್ಯದಲ್ಲಿರುವ[illegible] ಅನ್ಮೋಂಬಳರದೇ ಆದ ಬೆಡಗು. ಆ ಹಲವು ಸಾಲುಗಳ ನಾದ ಮಾಧುರ್ಯ[illegible] ಸವಿಯುವವರ ಪಾಲಿನ ರಸದೌತಣ.

ಸಹೃದಯರೂ ಆತ್ಮೀಯರೂ ಆದ ಈ ಕವಿಯ ಕವಿತಾ ಸಂಕಲ[illegible]ವನ್ನು ಕುರಿತು ಇನ್ನೂ ಹೆಚ್ಚಿನ ಮಾತನ್ನಾಡುವುದು ಅನುಚಿತವೂ ಹೌ[illegible] ಅನಗತ್ಯವೂ ಹೌದು.

ಇದು ಪ್ರೇಮಾಂಜಲಿ. ಅರ್ಪಿಸುವ ಕವಿಯುಂಟು; ಸ್ವೀಕರಿಸ[illegible] ರಿಸುಂಟು. ನಡುವೆ ತೊಂದರೆ ಕೊಡುವುದು ಸರಿಯಲ್ಲ!

೨೫ ಆಗಸ್ಟ್, ೧೯೫೬,
ಗೋಕುಲ ವಿಸ್ತರಣ,
[illegible] ವಿಲಾಸ ಮೊಹಲ್ಲಾ, ಮೈಸೂರು.

—ನಿರಂಜ[illegible]

# ಬಿನ್ನಹ

ಎಲ್ಲರ ಮನಸ್ಸನ್ನೂ ಒಲಿಸಿ ನಲಿಸುವ ಶೃಂಗಾರವು ರಸರಾಜವಾಗಿದೆ. ಅಲಂಕಾರ ಶಾಸ್ತ್ರವನ್ನು ಬರೆದ ಲಾಕ್ಷಣಿಕರು ಇದನ್ನು ನವರಸಗಳಲ್ಲಿ ಪ್ರಥಮವೆಂದು ಗೌರವಿಸಿ, ಮನ್ನಣೆಯ ಅಗ್ರಪೂಜೆಯನ್ನಿತ್ತು ಸಂಭಾವಿಸಿರುವರು.

ಶುಚಿಯಾದ ರುಚಿಯಾದ ನಿರ್ಮಲ ಶೃಂಗಾರ ಗೀತಗಳು ಪ್ರಣಯ-ಪ್ರೇಮಗಳ ಪೋಷಕ ತತ್ವವಾಗಿ, ಧರ್ಮಾವಿರುದ್ಧ ಕಾಮದ ರಂಜಕ ಸತ್ವವಾಗಿ, ಕೌಟುಂಬಿಕ ಗೃಹಸ್ಥ ಜೀವನಕ್ಕೆ ಸಂಜೀವನೌಷಧವಾಗಿ ಆರೋಗ್ಯದಾಯಕವಾಗಿವೆ.

ಅಶ್ಲೀಲದ ಆಭಾಸವಿಲ್ಲದ ಇಂತಹ ಕವನಗಳು ಸಂಸಾರದ ಚಿಂತೆಯ ವಿಷಗಳಿಗೆಗಳನ್ನು ಹೋಗಾಡಿಸಿ, ಕೆಲವಾದರೂ ಅಮೃತರಸ ನಿಮಿಷಗಳನ್ನು ಒದವಿಸಿಕೊಡಲು ಸಹಕಾರಿಗಳಾಗುತ್ತವೆ.

ಈ ಉದಾತ್ತ ಉದ್ದೇಶವನ್ನಿಟ್ಟುಕೊಂಡು, ಕೆಲವು ಕೌಟುಂಬಿಕ ಪ್ರಣಯ ವಿಲಾಸಗಳಿಗೆ ಭಾವನೆಯ ಮೆರುಗನ್ನು ಕೊಟ್ಟು, ಈ ಕವಿತೆಗಳನ್ನು ಆಗಾಗ ರಚಿಸಿದುದಾಗಿದೆ. ಕೆಲವುಗಳಲ್ಲಿ ನೈಜತೆಯ ಕಾಂತಿಯು ಮಿನುಗುತ್ತಿದೆಯಾದರೆ, ಇನ್ನೂ ಕೆಲವು ಕಲ್ಪನಾಲೋಕದ ಕಲಾತ್ಮಕತೆಯ ರಸ ಸೃಷ್ಟಿಯಾಗಿವೆ.

ಈ ಪದ್ಯಗಳೆಲ್ಲವೂ ಅಲ್ಲಲ್ಲಿ ಪತ್ರಿಕೆಗಳಲ್ಲೋ, ವಿಶೇಷ ಸಂಚಿಕೆಗಳಲ್ಲೋ ಬೆಳಕು ಕಂಡವುಗಳು. ಅವನ್ನು ಓದಿ ನೋಡಿ, ಸವಿದು ಮೆಚ್ಚಿದ ನನ್ನ ರಸಿಕರಾದ ಗೆಳೆಯ ಗೆಳತಿಯರ ಪ್ರೋತ್ಸಾಹದ ಒತ್ತಾಯವೇ ಈ ಸಂಕಲನವು ಹೊರಬರಲು ಆದಿಕಾರಣವಾಗಿದೆ.

ಇದಕ್ಕೆ "ಪ್ರೇಮಾಂಜಲಿ" ಎಂಬ ಮೊದಲ ಮಾತನ್ನು ಬರೆದು ಕೊಟ್ಟ ಆತ್ಮೀಯ ಗೆಳೆಯರಾದ ಶ್ರೀ. ಕುಳುಕುಂದ ಶಿವರಾಯ "ನಿರಂಜನರಿ"ಗೆ ಅತ್ಯಂತ ಕೃತಜ್ಞನಿರುವೆನು.

ನನ್ನ ಸಹೃದಯ ಮಿತ್ರರ ಮತ್ತು ಪ್ರೀತಿಯ ಬಂಧುಗಳ ಆರ್ಥಿಕ ನೆರವೇ ಈ ಪುಸ್ತಕವು ಮುದ್ರಣದ ಬಣ್ಣದ ಉಡುಗೆಯನ್ನುಟ್ಟು ಮುಖ ತೋರಿಸಲು ಪ್ರೇರಕಶಕ್ತಿಯಾಗಿದೆ. ಅವರ ನಿರ್ವ್ಯಾಜ ಉಪಕಾರಕ್ಕೆ ಚಿರ ಋಣಿಯಾಗಿರುವೆನು.

ಆನಂದಾಶ್ರಮ ಹೈಸ್ಕೂಲ್,
ಉಳ್ಳಾಲ
ತಾ. ೨೫—೮—'೫೬.

ಅಮ್ಮೆಂಬಳ ಶಂಕರನಾರಾಯಣ ನಾವಡ.

ಪ್ರೇಮೋಪಹಾರ

ಇಗೋ ನಿನಗೆ—



ಬಾಳ ಗೆಳತಿ ಪಾರ್ವತಿ!
ಓದು ನನ್ನ ಈ ಕೃತಿ.

# ಬಾಳ ಗೆಳತಿ!

ಬಾಳ ಗೆಳತಿ! ಬಾಳಸೊಡತಿ
ನಲುಮೆಯೊಂದು ಮೂರುತಿ
ನನ್ನ ನಿನ್ನ ಪ್ರೇಮದೀಪ
ಬೆಳಗಲೊಲವಿನಾರತಿ.

ಕಾಮದೊಂದು ಯಂತ್ರವಾಗಿ
ನನ್ನ ಬಳಿಗೆ ಸುಳಿಯದೆ,
ಪ್ರೇಮದೊಂದು ಮೌನ ಮಂತ್ರ
ವಾಗಿಯುರಳಿಸನ್ನೆದೆ.

ಪ್ರೀತಿಯಮೃತವರ್ತಿಯಲ್ಲಿ
ಜೀವ ಜ್ಯೋತಿ ಬೆಳಗಲಿ
ನೀತಿ ನೇಹವಾರದಿರಲಿ
ಕರಿಕುಗಟ್ಟದುರಿಯಲಿ.

ಪ್ರೇಮಯೋಗದಿಂದ ನಮ್ಮ
ಚಿತ್ತ ಬೆಸುಗೆ ಪಡೆಯಲಿ
ಸಾಮಗೀತವೊಂದು ವಿದಿತ
ಹೃದಯ ವೀಣೆ ನುಡಿಯಲಿ.

ಒಲುಮೆಯೊಂದರಡುವೆ ಬಾಳ್ವೆ-
ಗೊಂದು ಬೆಳಕಿನಲೆಯಿದೆ.
ನಲುಮೆ ಸೊದೆಯು ಸೋಂಕಿನಿಂದ
ನೋವು ನಂಜು ಕರಗಿದೆ.

ದೇವದೇವನರ್ಘವಿಹುದು
ಪ್ರೇಮ ಭಾವ ರೀತಿಯು
ಜೀವ ಜೀವ ಸಾಮರಸ್ಯ-
ವೊಂದೆ ಪ್ರೀತಿ ನೀತಿಯು.

---

# ನನ್ನಾಕೆ

೧

ಜೌವನದ ಬಟ್ಟಲಲಿ ಪ್ರೇಮಸುಧೆಯನ್ನೆರೆದು
    ಕುಡಿಸುತಿಹ ನನ್ನಾಕೆಯಿರೆ ಸಗ್ಗವೇಕೆ?
ಜೀವಮಧುಕರನವಳ ಮುಖಕಮಲದಿಂದೊಲಿದು
    ಸೌಂದರ್ಯ ಮಧುವೀಂಟುತಿರೆ ಬೊಮ್ಮ ಬೇಕೇ?

೨

ಎತ್ತ ನೋಡಿದರತ್ತಲವಳ ಮೊಗಚಂದಿರನು
    ಮುಗುಳುನಗು ಬೆಳದಿಂಗಳೆರೆಯುತಿರುವಂತೆ
ಚಿತ್ರ ಭಾವದ ಕಣ್ಗೆ ದರ್ಶನವನೊದವಿಸುತ
    ಲೋಪವೆಸಗುವನಿತರ ಚಿಂತೆಗಳ ಸಂತೆ.

೩

ಮುಡಿಯಲ್ಲಿ ಮಲರಿರುವ, ನಳಿತೋಳ ಶಾಖೆಗಳ,
    ಕೇಸುಗುರ ಬೆರಲುಗಳ ತಳಿರನಾಂತೆಸೆವ,
ನಡೆಯುವೆಳವಳ್ಳಿಯೊಂದತ್ತಿತ್ತ ಮೆಲ್ಮಿಂಚ
    ಹರಹುತ್ತ ಸಂಚಾರವೆಸಗುವಂತಿರುವ,—
ನನ್ನಾಕೆಯೆನ್ನ ಜೀವನತರುವನಪ್ಪಿರಲು
    ಸಂತಸದ ಸುಮಗಳಿಗೆ ಬರಗಾಲವಿಹುದೇ?
ಬನ್ನಗಳ ಕತ್ತಲೆಯು ಮೊತ್ತಗಳ ಕೆಡುನೆನಪು
    ನೇಸರಿದಿರಿನ ಮಂಜುವನಿಯಾಗದಿಹುದೇ?

೪

ಅವಳ ಚೆಲುಗೆನ್ನೆಗನ್ನಡಿಯಲ್ಲಿ ನನ್ನ ತುಟಿ-
    ಯೆಸಳುಗಳ ಪಡಿನೆಳಲ ಕಾಣುತಿರುವಾಗ,
ಅವಳ ಮೈಯೊತ್ತಿನಲಿ ಕುಳಿತೆನ್ನ ಹಸ್ತಗಳು
    ಹೆಗಲುಗಳ ಬಳಸುತ್ತ ತಬ್ಬುತಿರುವಾಗ,—

ಅವಳ ಕಂಗಳ ಹೊಳಪು ನನ್ನನಾವರಿಸಿರಲು,
ಸೋಂಕಿನಮೃತಾನಂದ ಚಿಮ್ಮುತಿರಲು,
ಕಿವಿಗಳಿಗೆ ಇನಿದನಿಯು ಮೆಲ್ಲೊಸೆದು ಬೆಸೆದಿರಲು
ಬೇರೆ ಬ್ರಹ್ಮಾನಂದಕಿಹುದು ಸೋಲು.

೫

'ಬಡತನದಿ ಬೆತೆಯಿಲ್ಲ; ಬಾಳಿನಲಿ ಬೆಳಕುಂಟು.
ಎರಡು ಜೀವಗಳೈಕ್ಯವಾದ ಬೆಸುಗೆಯುಲಿ
ಒಡವೆರೆದ ನಲ್ಮೆಯಲಿ ನೈಜ ಸುಖವುುಖವುಂಟು.'
ಎಂಬ ಭಾವದ ಬೋಧೆಯರಿತೆನಾಕೆಯುಲಿ.

---

# ತವರುಮನೆಯಲಿ ಮಡದಿ

೧

ಚೊಚ್ಚಲು ಬಸಿರಿನ ಸಂಭ್ರಮದಿಂದ
ಮಡದಿಯು ತವರಿಗೆ ಸಾಗಿಹಳು.
ಅಗಲಿಕೆಯುರಿಯಲಿ ಬೇಯುತ ನಾನಿಹೆ.
ಕನಸಿನ ಲೋಕದಿ ಕಾಣುವಳು.

೨

ಹೋಟೆಲ ಮಾಣಿಯು ಬಳಸುವ ಸೌಟು
ಕಣ್ಣಿಗೆ ಹಿತವನು ಮಾಡದಿದೆ.
ನಲ್ಲೆಯ ಕೈಸೋಕಿಲ್ಲದ ಕಾಫಿಯು
ಸೌಸವ ಸವಿಯನು ಕಾಣದಿದೆ.

೩

ಮನೆಯಲಿ ಹೊಸ್ತಿಲು ಮಣಿಯುವರಿಲ್ಲದೆ
ಜೋಲುವ ಮೋರೆಯನಾಂತಿಹುದು.
ರಂಗೋಲೆಯ ಕೈಕುಸುರಿನ ಚೆಲುವಿಕೆ-
ಯಿಲ್ಲದೆ ಬಾಗಿಲು ಅಳುತಿಹುದು.

೪

ಮದುವೆಯ ಕಾಲದ ನಮ್ಮಿಬ್ಬರ ಪಟ
ದೂಳಿನ ಮುಸುಕನು ತಳೆದಿಹುದು.
ಗೋಡೆಗೆ ಮಾಡಿಗೆ ಜೇಡನ ಬಲೆಸುಳಿ
ವೃತ್ತಾಕಾರವನೆಯ್ದಿಹುದು.

೫

ರವಿವರ್ಮನ ಕೈಕುಂಚದಿ ಬೆಳಗಿದ
ವೀಣಾಶಾರದೆ ಅದೊ ಅಲ್ಲಿ
ಹೂವಿನ ಬತ್ತಿಯು ಪರಿಮಳವಿಲ್ಲದೆ
ನಮೆವಳು ಮೌನದ ಕಳೆ ಚೆಲ್ಲಿ.

೬

ಮಾಲಗುವ ಮನೆಯಲಿ ಸಿಂಗರವಿಲ್ಲದೆ
ಶೂನ್ಯವು ರಾಜ್ಯವನಾಳುವುದು.
ಮುಳ್ಳಿನ ಹಾಸಿಗೆಯಲಿ ಮೈ ಚೆಲ್ಲಿರೆ
ನಿದ್ದೆಯು ಮುನಿಸನು ನಟಿಸುವುದು.

೭

ಸತಿ ಬಿಟ್ಟಿರದಿದ ಬಣ್ಣದ ಸೀರೆಯು
ಚಿತ್ರಕಸೂತಿಯ ರವಕೆಗಳು
ಕಣ್ಣಿಗೆ ಹಬ್ಬವನೀಯುತಲಿರಲು
ಚಿತ್ತಕೆ ಶಾಂತಿಯನೀಯುವಳು.

---

# ನಲ್ಲೆಯ ನೆನಪು

ನಲ್ಲೆ! ಎಂದೈತರುವೆಯೋ?
ಬಗೆಗೆ ಸೊಗವನ್ನೀವೆಯೋ? ॥ ಪಲ್ಲವಿ ॥

೧

ಯಾವ ಕಜ್ಜವ ಗೈಯು ಹೋದರು
ನಿನ್ನ ನೆನಪೇ ಸುಳಿವುದು.
ಅಚ್ಚುಗಟ್ಟಿನೊಳಾವ ಕಾರ್ಯವ-
ನೆಸಗಲಿಚ್ಛೆಯೆ ಬಾರದು.

೨

ಪ್ರಕೃತಿರಂಗದೊಳೆಲ್ಲಿ ನೋಡಲು
ನಿನ್ನ ನೆನಪಿದೆ ನಲ್ಲೆಯೆ!
ಆವ ವಸ್ತುವ ಕಾಣ ಹೋದರು
ನಿನ್ನ ಪಡಿನೆಳಲಲ್ಲಿಯೆ.

೩

ಸಂಜೆಗೆಂಪನು ನೋಡಿ ಮನವನು
ಬಿನದಗೊಳಲಿಚ್ಛಿಸಿದರೂ,
ನಿನ್ನ ಚೆಂದುಟಿಗೆಂಪಿನ ಸ್ಮೃತಿ
ಬಂದು ಚಿತ್ತವ ಕವಿವುದು.

೪

ನೇಸರಿನ ಎಳೆಬಿಸಿಲನಂತೆಯೆ
ಚಂದಿರನ ಬೆಳ್ದಿಂಗಳ
ನೋಡು ನೋಡುತ ನೆನಪು ನಲಿವುದು
ನಿನ್ನ ನಗುಮಲ್ಲಿಗೆಗಳ.

೫

ಮಾಮರದ ಮರೆಯಲ್ಲಿ ಕುಕಿಲುವ
ಕೋಗಿಲೆಗಳಿನಿದನಿಯನು
ಆಲಿಸುತ್ತಿರೆ ನಿನ್ನ ಮಧುರಾ-
ಲಾಪವನು ನಾ ನೆನೆವೆನು.

೬

ಬಳ್ಳಿಯಲಿ ಮಲರಿರುವ ಹೂಗಳ
ಚೆಲುವಿಕೆಯ ದಿಟ್ಟಿಸುತಿರೆ,
ನಿನ್ನ ನಗೆಗಣ್ಣುಗಳು ಬಗೆಯಿದಿ-
ರಲ್ಲಿ ಕುಣಿವಂತೆನಿಪುದು.

೭

ಕತ್ತಲೆಯ ಕಾಳಿಮೆಯ ನಿಟ್ಟಿಸೆ
ನಿನ್ನ ಸುಳಿಗುರುಳೋಳಿಯ
ಕಾರ್ಷ್ಣ್ಯ ಕಣ್ಣಿಗೆ ಕಟ್ಟಿದಂತೆಯೆ
ನಲ್ಲೆ ! ಸವಿನೆನಪೆಸೆವುದು.

ನಲ್ಲೆ! ಎಂದೈತರುವೆಯೋ?
ಬಗೆಗೆ ಸೊಗವನ್ನೀವೆಯೋ?

---

# *ಇಂದು ಬರುವಳು ನನ್ನ ಮನದನ್ನೆ,—

ಇಂದು ಬರುವಳು ನನ್ನ ಮನದನ್ನೆ, ಮಾನಸಕೆ
ಸಂತೋಷ-ಸಂಭ್ರಮೋತ್ಸಾಹ ಸುರಿಸಿ
ಒಂದು ತಿಂಗಳಗಾಧ ವಿರಹ ಸಾಗರವನ್ನು
ದಾಟಿಪಳು ಸಗ್ಗದೀವಿಯನೊದವಿಸಿ.

ಎಲ್ಲಿ ನೋಡಿದರಲ್ಲಿ ನಲವಿನ್ನೈಸಿರಿಯೇರಿ
ಒಲವಿನೊಸಗೆಯ ಕುಣಿತ ಕಣ್ಣಮುಂದೆ: —
ಉದಯ ಭಾಸ್ಕರನಿಂದು ರಾಗರಕ್ತತೆಯಿಂದ
ಪ್ರೇಮಪೂಜಕನಾಗಿ ತೋರುತಿಪನು.

ವಿಹಗ ಸಂಕುಲದುಲಿತ ಸುಪ್ರೀತಿ ಸಂಗೀತ
ರಾಗರಸ ಮಧುನಾದವಾಗಿರುವುದು.
ಕಣ್ಣಿದಿರ ಪೈರ ಬೆಳೆ ಹಸುರು ಹೊಳೆ ಹರಿವಂತೆ
ಒಲುಮೆಯಲೆಯೊಲೆವಂತೆ ಭಾಸವಿಹುದು.

* * * *

ಹಗಲುಗಳ ಜಕ್ಕವಕ್ಕಿಗಳಂತೆ ನಾವಿಬ್ಬ-
ರೆಡೆವಿಡದೆ ಸಂತತಂ ಸೇರುವೆಯನು
ಪಡೆದಿರಲು ಬೇಕೆಂದು ಒಡನಾಟವಿರಲೆಂದು
ಸ್ವಾರ್ಥ ದೃಷ್ಟಿಯ ಚಿತ್ತ ಚಿಂತಿಸಿದರೂ,—

ಆಗೊಮ್ಮೆ ಈಗೊಮ್ಮೆ ತಾಯಮನೆ-ತವರುಮನೆ-
ಯೆಂದು ಹೋಗಲು ಬರಲು ನಲ್ಲೆಗಿಹುದು.
ಎಳೆತನದಿ ಸಾಕಿರುವ ತಂದೆತಾಯ್ದಿರ ಮಮತೆ
ಬಂದು ಮಡದಿಯ ಕರೆದುಕೊಂಡೊಯ್ಯುವುದು.

---

* ಹೆಂಡತಿಯು ತವರುಮನೆಯಿಂದ ಬರುವ ದಿವಸ

ಆಗವಳ ನಗುಮೊಗದ ಬೆಳಗು, ಕದಪಿನ ಮೆರುಗು,
ಸವಿಮುಟಿಗೆಳಿಂಪು-ಬೆಳ್ಗೆಂಪು-ಸೊಂಪು,
ಮನಸೆಳೆವ ನೀಳ್ಗಣ್ಣುಗಳ ಕಾಂತಿ-ಚಂಚಲತೆ
ಮುಂಗುರುಳುಗಳ ಕೊಂಕು-ಸುಳಿಯು-ಕಂಪು —

ಕೆಲವು ದಿನಗಳ ವರೆಗೆ ನನ್ನಿಂ ವಿಯೋಗವನು
ಹೊಂದಿ ಸಹ್ಯಾಸಾಧ್ಯತೆಯು ಪಡೆವುವು.
ಆದರೂ ಮನವು ಮೌನದೊಳಿರದೆ, ಭಾವನೆಯು
ಭಿತ್ತಿಯಲಿ ನಲ್ಲೆಯಂಕಿತ ಗುರುತಿಸಿ, —

ಕಾಲವನು ತಳುವಿ, ಇಂದಿನ ತೆರದ ದಿನವನ್ನು
ಕಾಂಬ ಸೈಪಿನ ಸುಕೃತವನುಭವಿಪುದು.
ಎಂದಿಗಿಂತಲು ಇಂದು ಸಂತೋಷದಾಧಿಕ್ಯ-
ವದರಿಂದ ವಿರಹದಲಿ ಲಾಭವಿಹುದು.

ಇಂದೋಪಳೈತಂದು ಪ್ರೇಮ ಪ್ರವಾಹದಲಿ
ಆನಂದ ಜಲದಿಂದ ಮಿಾಯಿಸುವಳು.
ತೋಳುಗಳ ಹೂಸರಗಳಿಂದೆನ್ನ ಸೆರೆವಿಡಿದು
ಸವಿಮುತ್ತುಗಳ ಮಾಲೆ ತೊಡಿಸಲಿಹಳು.

---

# ಕೋಪವೇತಕೆ ಮಾನಿನಿ?

ಕೋಪವೇತಕೆ ಮಾನಿನಿ?
ಹುಸಿಮುನಿಸ ನನ್ನಲಿ ನೀಗು ನೀ. ॥ ಪಲ್ಲವಿ

೧

ಜೀವನವೆಂಬುದು ಜೀವನ ಕೈಲಿಲ್ಲ;
ನಶ್ವರವಾಗಿದೆ ವಿಶ್ವದಲಿ.
ಇಂದೋ ನಾಳೆಯೊ ಎಂಬುದು ತಿಳಿದಿಲ್ಲ
ಬಾಳ್‌ಗುಳ್ಳೆ ಸಿಡಿವುದು ದಿಟವಿಲ್ಲಿ.

೨

ಹೀಗಿರಲೇಕಾಗಿ ನಮ್ಮಿಬ್ಬರೆದೆಯಿದು
ಏಕತೆಯನು ಬಿಟ್ಟು ದೂರ-ದೂರ?
ಸಿಟ್ಟಿನ ಸಾಗರ ಹಟದ ಸವಿಸಾರನ
ತೀಟದಿ ಚಿಮ್ಮುತಲಿದೆ ಬೇಸರ.

೩

ಹಿಂದಿಲ್ಲ-ಮುಂದಿಲ್ಲ; ನಡುವಿನ ಜೀವನ
ಶೂನ್ಯಾಕಾಶದ ತಾರೆಯಿದೆ
ಮೋಡವು ಮುಸುಕಿ ಮುಗಿವುದಕಿಂತ ಮುನ್ನವೆ
ಸೂರೆಗೊಳ್ಳುವ ನಾವು ಸುಖದ ಸುಧೆ.

೪

ಜೀವನವೆಂಬುದು ಹೆಚ್ಚಿಲ್ಲ; ಬಾನಿನ
ಕಾಮನ ಬಿಲ್ಲಿನ ಹೋಲುವೆಯು.
ಹರಿಯು ಬಣ್ಣಗಳೆಂದು ವೈವರ್ಣ್ಯವಪ್ಪುವೊ
ಸಾಕೀ ಸಿಟ್ಟಿನ ವಿರಸತೆಯು.

೫

ಹಲ್ಲುಗಳಿದ್ದಾಗ ಹುರಿಗಡಲೆಯು ನಿಜ.
ಮತ್ತೆಲ್ಲಿ ಸಂತೋಷ ಮುದಿತನದಿ?
ಇಂದಿನ ಹಾಲನ್ನವನು ನಾವು ಬಿಟ್ಟರೆ
ನೈರಾಶ್ಯವಡಸದೆ ಜೀವನದಿ?

೬

ಇನ್ನೇಕೆ ಹುಬ್ಬಿನ ಬಳ್ಳಿಯೊಳಾ ಕೊಂಕು?
ಕಣ್ಣಿನ ಕಡೆಯುಲಿ ಕಡುಗೆಂಪು?
ತುಟಿಯದುರುವುದೇಕೆ? ಮೂಗರಳುವುದೇಕೆ?
ಮೂಡಿ ಬರಲಿ ಬಿಳಿನಗೆಯಿಂಪು.

೭

ಇಂದಿನ ದಿನ ನಮ್ಮದಾಗಿರೆ, ನಾಳೆಯು
ಯೋಚನೆಯೇತಕೆ?— ಬರಿಕನಸು
ಬಾಳಿನ ಬಳ್ಳಿಯು ಬಿಳಿಹೂವೆ! ಬಾ ಬಾರೆ.
ಜೀವನವಾಗಲಿ ದಿಟ ನನಸು.

---

## "ಸುಖವಿಲ್ಲ"

### (ಹೆಂಡತಿಯ ಮಾತು)

"ನಿಮ್ಮ ಕೈಯನು ಹಿಡಿದು ಮೂರು ಸುಗ್ಗಿಯು ಸಾಗಿ,
ನಾಲ್ಕನೆಯದಿದು ತಲೆಯ ಹೊರಹಾಕಿತಲ್ಲಾ?
ಚಕ್ರನೇಮಿಕ್ರಮದಿ ಹಗಲಿರುಳು ತಿರುತಿರುಗಿ
ಮಾಸ-ವರ್ಷಗಳಲ್ಲಿ ಪರಿಣಮಿಪುದಲ್ಲಾ?

ಆಚೆ ಮನೆ ಕಸ್ತೂರಿ, ನೆರೆಮನೆಯ ಸಿಂಗಾರಿ,
ಓಣಿಮನೆಯಾ ಶಾರಿ, ಬೀದಿ ಮನೆ ಗೌರಿ
ಈಚೆ ಮನೆಯಾ ಗಂಗೆ, ಮಗ್ಗುಲಲ್ಲಿಹ ತುಂಗೆ,
ದೊಡ್ಡಮನೆ ಕಾವೇರಿ ಗುಡ್ಡೆ ಮನೆ ನಾರಿ,—

ಇವರೆಲ್ಲ ತಂತಮ್ಮ ಗಂಡಂದಿರೊಡನೊರೆದು,
ಹೂಸೀರೆ ಜರಿಸೀರೆ ರವಕೆಗಳನು
ಉಟ್ಟಿಹರು ತೊಟ್ಟಿಹರು ಕೈಗಳಲಿ ಕತ್ತಿನಲಿ
ಬಗೆಬಗೆಯ ಬಂಗಾರ ತೊಡವುಗಳನು.

ಕಪ್ಪು ಸೀರೆಯನುಡುವುದೇ ನನ್ನ ಹಣೆಬರಹ.
ಬೇರೆ ಬಣ್ಣದ ಸೀರೆ ತಂದರೇನು?
ತೆಳುವಾದ ಬಿಳಿಸೀರೆ ಚಿತ್ರದಂಚಿನ ಸೀರೆ
ಕನಸಿನಲ್ಲುಡುವುದೇ ನನ್ನ ವಿಧಿಯೇನು?
ತಂದೆ ಮಾಡಿಸಿಕೊಟ್ಟ ಚಿನ್ನದಾಭರಣಗಳು
ಒಂದೆರಡೆ ಅಂದಿನಿಂದಿಂದು ವರೆಗೆ.
ನನಗಾಗಿ ತೂಕವೊಂದಾದರೂ ಚಿನ್ನವನು
ಕರಗಿಸಲದೇಂ ಮನವು ಬಂತೆ ನಿಮಗೆ?

'ಯುದ್ಧ ದುರ್ದಿನದಿಂದ ಪವನಿಗೇರಿತು ಬೆಲೆಯು.
ಕಡಿಮೆಯಾಗಲಿ. ಮಾಡಿಸುವೆ; ಚಿಂತೆಯೇಕೆ?
ಹೊನ್ನ ತಗಡನು ಮಾಡಿ ನಿನ್ನ ಮುಚ್ಚಿಪೆ'ನೆಂದು
ಲಲ್ಲೆಯಾಡುತಲಿರುವುದಿಷ್ಟೇನು ಸಾಕೇ?

ತಲೆಗೆ ಪರಿಮಳದೆಣ್ಣೆ, ಕೇಶವರ್ಧಿನಿ ತೈಲ,
ಮೊಗಕೆ ಸೌಸವವೀಯುತಿಹ ಬಿಳಿಯ ಹುಡಿಯು,
ತಲೆಕೂದಲೋರಣದಿ ನಿಲ್ಲುವಂತಿಹ 'ಕ್ಲಿಪ್ಪು',
ಹೆಣೆಜಡೆಯ ತುದಿನೆಯ್ಯಲಿಹ ರೇಶ್ಮೆ ಕುಡಿಯು—

ಬಣ್ಣನೂಲಿನ ಚಿತ್ರ ಬಿಡಿಸಿರುವ ಕರವಸ್ತ್ರ,
ಕೈಗಳಿಗೆ ಹೊಸ ಬಗೆಯ ಗಾಜುಬಳೆಯು,
ಈ ವಿಲಾಸದ ವಸ್ತುಗಳ ತನ್ನಿರೆಂದೆನಲು
ನಿಮ್ಮ ಮುಖಮುದ್ರೆಯಲಿ ಮೌನ ಕಳೆಯು.

ಯಾವಾಗ ನೋಡಿದರು ಪುಸ್ತಕಗಳೊಡನಾಟ;
ಓದುವುದು ಬರೆಯುವುದು—ಆಯಾಸವಿಲ್ಲ.
ಹಗಲಿಡೀ ನಿಮಗಾಯ್ತು ಪಾಠಶಾಲೆಯ ಕೂಟ
ನನ್ನೊಡನೆ ಸಲ್ಲಾಪ-ಸರಸೋಕ್ತಿಯಿಲ್ಲ.

ಸಾಕು ನಿಮ್ಮಯ ಪ್ರೀತಿ; ಬರಿಯ ಬಾಯುಪಚಾರ.
ತನ್ನ ಕಾರ್ಯಕೆ ಮಾತ್ರ ನನ್ನನಿಚ್ಛಿಪುದೇ?
ನಿಮ್ಮಿಂದಲೊಂದಿಷ್ಟು ಸುಖ ಹೊಂದಲೆನಗಿಲ್ಲ.
ಬರಿಗುಲ್ಲು ಕಡು ನಿದ್ದೆಗೇಡೆಂಬ ಗಾದೆ."

---

# " ಸುಖವುಂಟು "

## (ಗಂಡನ ಉತ್ತರ)

"ಮುಗುದೆ! ಮೋಹನೆ! ನಲ್ಲೆ! ನಿನ್ನ ಮಾತನು ಕೇಳಿ
ನಗುವುಕ್ಕಿ ತುಟಿಮಿಕ್ಕಿ ಬರುತಿರುವುದು.
ನಸುಮುನಿಸ ಹೊರಸೂಸಿ, ಕೊಂಕು ಹೂನುಡಿ ಚೆಲ್ಲಿ
ಬಿಂಕವೆಸೆವುದಿದೆಷ್ಟೊ ಚೆನ್ನಿರುವುದು.

ಬಣ್ಣ ಬೆಡಗಿನ ಜರಿಯು ಸೀರೆಯೇತಕೆ ನಿನಗೆ?
ಸರಳತೆಯ ಚೆಲುಸೀರೆ ಸಾಲದೇನು?
ಆ ಶಕುಂತಲೆ ನಾರ ಬಟ್ಟೆಯನ್ನುಟ್ಟಿರಲು
ದುಷ್ಯಂತನಿಗೆ ಚೆಲುವನೀಯಳೇನು?

ಹೊನ್ನ ಭೂಷಣವೇಕೆ? ಲೋಹ ಹೊರೆಯಲ್ಲವೇ?
ಆಭರಣವಿಲ್ಲದಿರೆ ಚೆಲುವು ಕುಂದೇ?
ಸೀತೆ-ಪಾಂಚಾಲೆಯರಿಗಿದ್ದುವೇ ತೊಡವುಗಳು
ಕಾಡಿನಲೆದಾಟದಲಿ?—ಪತಿಯು ಜೊತೆಯೊಂದೇ.

ನಮ್ಮ ತೋಟದೊಳಿಷ್ಟು ಹೂಗಳರಳುತ್ತಿರಲು
ಓರಣದಿ ತಲೆ ಬಾಚಿ ಹೂಮುಡಿದರೇನು?
ದಿನದಿನಕೆ ನಿತ್ಯ-ನೂತನವಾದ ಹೂದಂಡೆ
ಹೊನ್ನಿಗಿಂತಲು ಚಂದವಲ್ಲವೇನು?

ಕುಸುಮುಗಳ ಸೌಸವವು, ಚೆಲುವಿನಲಿ ವಿವಿಧತೆಯು,
ಮಾರ್ದವವು ಹೊಂದೊಡವುಗಳಿಗಿರುವುದಿಲ್ಲ.
ಕೃತ್ರಿಮತೆಯಲಿ ಚೆಲುವನಾನುವುದು ತರವಲ್ಲ;
ನೈಜತೆಯ ಸೌಂದರ್ಯ ಸಾಕು ನಮಗೆಲ್ಲ.

ಬಾಹ್ಯ ವಸ್ತುಗಳಲ್ಲಿ ಸುಖ ಹುದುಗಿಕೊಂಡಿಲ್ಲ.
ಮನದ ಮರೆಯಲಿ ಮನೆಯ ಮಾಡಿರುವುದು.
ಆಸೆಮುಗಿಲುಗಳೋಳಿ ತಿಳಿವುಗಾಳಿಗೆ ಚೆದರೆ,
ತೃಪ್ತಿನಭದಲಿ ಸೊಗದ ನೇಸರೆಸೆಯುವುದು.

ಕವಿತೆಗಳ ಗಂಧರ್ವ ಲೋಕದ ವಿಹಾರದಲಿ,
ಕಥೆ ವಾಚನದ ಕಿನ್ನರರ ಕೂಟದಲ್ಲಿ,
ನಾಟಕಂಗಳ ನಾಕದಪ್ಸರೆಯ ನಾಟ್ಯದಲಿ
ಸುಖವುಂಟು ಮನದನ್ನೆ! ಭಾವಲಹರಿಯಲಿ."

---

# ಮುಗುದೆ

೧

ನನ್ನೀ ಹೆಣ್ಣನು ಬಣ್ಣಿಪೆನೆಂತು?
ನಾಚಿಕೆಯಿವಳಿಗೆ ಸಿಂಗಾರ.
ಕಡೆಗಣ್ಣೋಟದ ಕೊಂಕೇ ಬಿಂಕ
ಮೌನದ ಮೋಡಿಯೆ ವಯ್ಯಾರ.

೨

ಹಿರಿಯರ ಇದಿರಿಗೆ ಹೆಸರೆತ್ತಿದರೆ
ಮೊಗವನು ಕೆಳಗಿಸಿ ನೋಡುವಳು.
ಏನನ್ನಾದರು ಪ್ರಶ್ನಿಸಿ ನುಡಿದರೆ
ಉಂಗುಟದಲಿ ನೆಲ ಗೀರುವಳು.

೩

ಏಕಾಂತದಿ ಮೊಗ ಮೇಲೆತ್ತಿದರೆ
ಮೋರೆಯನಾಚೆಗೆ ತಿರುಗಿಪಳು.
ಕೈಹಿಡಿದೀಚೆಗೆ ಮೆತ್ತಗೆ ಸೆಳೆದರೆ
ಕೆನ್ನೆಯ ಕಿತ್ತಳೆಯಾಗಿಪಳು.

೪

ಹೊಸ ಹರೆಯದ ಬಲು ಚೆಲುವೆಯು ಬಾಲೆ
ಮುದ್ದಿನ ಮುಗುದೆಯು ಮೋಹನೆಯು
ನನ್ನೀ ಬಾಳಿಗೆ ಸಂತಸದೊಸಗೆಯು
ಸೌಭಾಗ್ಯದ ಜಲ ಸೇಚನೆಯು

---

# ಕಿಶೋರಿ

೧

ನಾನು ಕಂಡಿರುವ ಚೆಲುಬಾಲೆಯರ ಸೌಂದರ್ಯ
ಸಾರ ಸರ್ವಸ್ವದಂತಿವಳೆಸೆಯುತಿಹಳು.
ಕಣ್-ಮನಕೆ ಸ್ನೇಹರಸದೊಸರ ಸೇಚಿಸುತಿವಳು
ತಂಗದಿರನಂತೆ ತಂಪೀಯುತಿಹಳು.

೨

ಇವಳ ಕಡೆಗಣ್ಣೋಟದಲ್ಲಿ ಮಿಂಚಿನ ಚಂಚ-
ಲೇಕ್ಷಣವು ಮನೆಮಾಡಿಕೊಂಡಿರುವುದು.
ಇವಳ ಮಂದಸ್ಮಿತದಿ ಪ್ರೇಮರಸವೊಸರುತ್ತ
ಜ್ಯೋತ್ಸ್ನವದು ತುಂಬಿ ತುಳುಕುತ್ತಲಿಹುದು.

೩

ನಡೆಯುವ ಕಿಶೋರಿಯಾ ಬೆಡಗ ಬಣ್ಣಿಪುದೇನು?
ಬಡನಡುವು ಬಳುಕುತ್ತಲಿರುತಿರುವುದು.
ನಿಡುಜಡೆಯು ನಲಿಯುವುದು, ನಳಿತೋಳು ಒಲೆಯುವುದು
ಕಡುಗಾಡಿಯನ್ನವಳು ಸೂಸುತಿಹಳು.

೪

ಇವಳ ಎದೆಯುಬ್ಬಿನಲಿ ಜನರ ಮನವನು ಸೆಳೆದು
ವಶ್ಯವಾಗಿರಿಸುತಿಹ ಮಾಟವಿಹುದು.
ಇವಳ ಚೆಂದುಟಿಯಲ್ಲಿ ಸಂಜೆಗೆಂಪಿನ ಸೊಬಗು
ಮುಗ್ಧತೆಯು ಮುಗುಳುನಗು ನಗುತಿರುವುದು.

೫

ಚೂರ್ಣಕುಂತಳವಿವಳ ವದನದಲಿ ನಲಿಯುತ್ತ
ಸೊಬಗಿನಾ ಚಿತ್ರವನು ಬರೆದಿರುವುದು.
ಹುಣ್ಣಿಮೆಯ ಚಂದಿರನ ಸೌಂದರ್ಯವನ್ನಿಳಿಕೆ-
ಗೈಯುವುದು ಶೋಭಿಸುವ ಮುಖಕಮಲವು.

೬

ಇವಳ ಸವಿನುಡಿಯ ಸರಸತೆಯಲ್ಲಿ ಅಮೃತಮಯ
ಮಾಧುರ್ಯ ಮನೆಮಾಡಿ ಮೆರೆದಿರುವುದು.
ಇವಳ ಮೆಲುನಡಿಗೆಯವಸರದಲ್ಲಿಯೊಲೆಯುತಿಹ
ಸೆರಗು ನಮ್ಮನು ಸನ್ನೆಯಿಂದ ಕರೆಯುವುದು.

೭

ಇವಳೆ ಮುದ್ದಿನ ಕಣಿಯು, ಇವಳೆ ಪ್ರೇಮದ ಮಣಿಯು
ಇವಳೆ ಸೊಗಸಿನ ರಾಣಿಯಾಗಿರುವಳು.
ಇವಳೆ ಸೊಬಗಿನ ಸೂರೆಯಿವಳೆ ನಲವಿನ ನೀರೆ
ಇವಳೆ ಪ್ರಣಯದ ದೇವಿಯಾಗಿರುವಳು.

---

# ಬಾ ಗೆಳತಿ!

ತಿಂಗಳ ಬೆಳಕಿಗೆ ಬಾ ಗೆಳತೀ!
ತಂಗದಿರನ ಕಾಣ್ ಬಗೆಯೊಡತಿ!

ಅಂಗಳದಲ್ಲಿಹ ದಿನ್ನೆಯ ಮೇಲಿಗೆ
ಹೂವಿನ ಚಿಗುರಿನ ಮೆಲ್ಹಾಸು
ಹಾಸಿದೆ; ನಮ್ಮನು ನಲುಮೆಯು ಕರೆಯಲಿ
ಸ್ವಾಗತಿಸುತ್ತಿದೆ ಕುಳ್ಳಿರಲು.

ಬೆಳುದಿಂಗಳ ಸಿರಿ ಸಿಂಗರವಾಗಿದೆ
ಹಾಲಿನ ಹೊಳೆ ಹರಿದಂತಿಹುದು.
ಮಲ್ಲಿಗೆ ಬೆಳ್ಳಗೆ ಚೆಲ್ಲಿದ ತೆರದಲಿ
ಬೆಳಕಿನ ಹುಚ್ಚನು ತಳೆದಿಹುದು.

ಆಗಸದಲಿ ಬಿಳಿಮುಗಿಲುಗಳೋಳಿಯು
ಹಿಂಜಿದ ಹತ್ತಿಯ ಹರಡಿಹುದು.
ಹುಣ್ಣಿಮೆ ಚಂದ್ರನ ತುಂಬಿದ ಬಿಂಬವು
ಕಣ್ಣಿಗೆ ಹಬ್ಬವನೀಯುವುದು.

ಶೋಭಾರಾಶಿಯು ಚೆಲ್ಲಿದೆ ನಲ್ಲೆಯೆ!
ಸಂತಸವುಣ್ಣಲು ಬಾ ಬಾರೆ.
ಪ್ರಕೃತಿಯು ಬೀರಿದ ಚೆಲುವಿನ ಸಂತೆಯ
ಕೊಳ್ಳುವ ಬೇಗನೆ ಬಾ ನೀರೆ!

ಮರಗಳ ಶಾಖೆಯು ಬಳುಕಿದ ಬಳ್ಳಿಯ
ತಬ್ಬುತ ಪಿಸು ಮಾತಾಡುತಿದೆ.
ಭೂಮಿಯು ಚಂದಿರನಿತ್ತಿಹ ಮುತ್ತಿಗೆ
ಪುಲಕಿಸಿ ಬೆಳ್ನಗೆ ಬೀರುತಿದೆ.

ಸುಂದರ ಸುಮಧುರ ಸಮಯವು ಕಾದಿದೆ
ನಿನ್ನಾಗಮನದ ಸವಿಸಿರಿಗೆ
ನಾವಿಬ್ಬರು ಬೆಳುದಿಂಗಳ ಹೊನಲಲಿ
ವಿಹಾಯುವ ಹರುಷದಿ ಬಾ ಬಳಿಗೆ

ತಿಂಗಳ ಬೆಳಕಿಗೆ ಬಾ ಗೆಳತೀ!
ತಂಗದಿರನ ಕಾಣ್ ಬಗೆಯೊಡತಿ!

---

# ನಲ್ಲೆಯ ನಗುಮೊಗ

೧

ನಲ್ಲೆಯ ನಗುಮೊಗ ಬಳಿಯಲ್ಲಿದ್ದರೆ
ಮನೆಯೆಲ್ಲಾ ಬೆಳಗು.
ಮನೆಯಲ್ಲಿರದಿರೆ ಭಣ ಭಣ ಶೂನ್ಯವು
ಮನವೆಲ್ಲಾ ಕೊರಗು.

೨

ಆಕೆಯ ನಗೆಯೇ ಸೋತಿಹ ಜೀವಕೆ
ಸವಿ ಸಂಜೀವನವು.
ಬರಿದಾಗಿಹ ಬಗೆ ಭಾವನೆಗಳಿಗೆ
ಅಮೃತದ ಸೇವನವು.

೩

ಜೆಳ್ಳಗೆ ನಗೆಯಿರೆ ಬೆಳುದಿಂಗಳ ತೊರೆ
ಹರಿದಂತೆನಿಸುವುದು.
ಬಿಮ್ಮಗೆ ಮೌನದಿ ಮುನಿಸನ್ನಾಂತರೆ
ಕತ್ತಲೆಯೊದಗುವುದು.

೪

ಎಂದೆಂದೂ ಬೆಳುನಗುಮೊಗವಿದ್ದರೆ
ಬಾಳ್ವೆಯು ಮಧುಮಾಸ.
ನಲ್ಲೆಯ ಮಧುರ ಪ್ರಸನ್ನತೆಯೆಂದರೆ
ಶೃಂಗಾರದ ಹಾಸ.

---

# ಸಂಜೆ ಕಡಲು ಕರೆಯಲ್ಲಿ ನಲ್ಲೆಯೊಡನೆ

೧

ಕಡಲಿನ ಕರೆಯಲಿ ನಿಂತಿಹೆವು
ಸಂಜೆಯ ಕಳೆಯುವೆವು
ಗಾಳಿಯ ಮಡಿಲಿನೊಳಾಡುವೆವು
ತೆರೆಗಳ ದೂರ ನೋಡುವೆವು.
ಹೊಯಿಗೆಯ ಹಾಸಿಗೆ
ಹರಡಿದೆ ಬೆಳ್ಳಗೆ
ಕುಳ್ಳಿರೆ ಕರೆವುದು ಬೈಗಿಂಗೆ.

೨

ಕಡಲಿನ ತೆರೆನೆರೆ ಬಿಳಿಯಿಹುದು
ದಂಡೆಗೆ ಹೊಡೆಯುವುದು.
ನೀರಿನ ನೀಲಿಮೆಯೆಸೆಯುವುದು
ನೊರೆಯಲಿ ನಗುತಿಹುದು.
ತೆರೆಗಳ ಸುರುಳಿ
ನಗುನಗುತುರುಳಿ
ಮುಂದಕೆ ನೆಗೆವುದು ಮುಂತೆರಳಿ.

೩

ಜಲಧಿಯ ಗೀತವು ಮೊರೆಯುತಿದೆ
ತೆರೆ ಸರ ಕೆಲೆಯುತಿದೆ.
ಅಲೆಗಳ ಹೊಡೆತವು ಕಿವಿದೆರೆಗೆ
ಕೇಳಿಪುದಡಿಗಡಿಗೆ.
ಕಡಲಿನ ತಂಪು
ಗಾಳಿಯೊಳಿಂಪು
ಮನಸಿಗೆ ಬೆಸೆವುದು ಸವಿಸೊಂಪು.

೪

ಕಂತುವ ಸೂರ್ಯನು ಸೂಸುವನು
ಕಿತ್ತಳೆ ಬಣ್ಣವನು.
ಕಿರಣದ ಮೊನೆಯಲಿ ಮಿನುಗುವನು
ನೀರಿನೊಳೆಸೆಯುವನು.
ಪಡುವಣ ಬಾನು
ಮುಗಿಲಿನ ಸಾನು
ಕರೆವುದು ಕೆಂಪಿನ ಸೋನೆಯನು.

೫

ಹತ್ತಿರ ನಲ್ಲೆಯು ನಗುತಿಹಳು.
ಒತ್ತಿಗೆ ನಿಂತಿಹಳು
ಹೆಗಲನು ತಬ್ಬುತ ಹಿಡಿದಿಹಳು.
ನಲಿವುದು ಮುಂಗುರುಳು.
ಹೂನಗು ಚೆಲ್ಲಿ
ಸಂತಸದಲ್ಲಿ
ಇಬ್ಬರು ನಿಂತೆವು ಮೌನದಲಿ
ಚೆಲುವಿನೊಳೈಕ್ಯವನಾನುತಲಿ.

# ಪ್ರಿಯಂದರ್ಶಿನಿ!

“ಪ್ರಿಯದರ್ಶಿನಿ! ಮನಮೋಹಿನಿ
ಹಂಸಾಲಸ ಯಾನೇ!
ಕಲಭಾಷಿಣಿ! ವರವರ್ಣಿನಿ!
ಚಂದ್ರೋಜ್ವಲ ವದನೇ!

ಗೌರಸ್ಮಿತೆ! ಸೌರಭಯುತೆ!
ಭೃಂಗಾಸಿತ ಚಿಕುರೇ!
ಪಿಕಭಾಷಿತೆ! ಸುಮಭೂಷಿತೆ!
ಬಿಂಬಾಧರ ಮಧುರೆ!

ಕುಂದೋಜ್ವಲ ರದನಾನ್ವಿತೆ!
ನಳಿನಾಯತ ನೇತ್ರೇ!
ಚಿತ್ರಾಂಬರ ಸಂಶೋಭಿತೆ
ಚಾರುಲತಾ ಗಾತ್ರೇ!”

ಇಂತೋರ್ವನು ಪ್ರಿಯ ರಸಿಕನು
ತನ್ನೊಲ್ಪಳ ಪೊಗಳೆ,
ಕಣ್ಣರಳಿತು ನಗುವೊಲಿಯಿತು
ಮುನಿಸೋಡಿತು ಪ್ರಿಯೆಗೆ.

ನಸುಮುನಿಸಿನ ಪ್ರಣಯಾನ್ವಿತೆ
ಲಜ್ಜಾತುರೆ ಮುಗ್ಧೆ
ಒಯ್ಯಾರದಿ ಪಿಸುನುಡಿಯುತೆ
ಒಲಿದಳು ಸುಸ್ನಿಗ್ಧೆ.

# ಉಯ್ಯಾಲೆಯಾಡೋಣ!

ಉಯ್ಯಾಲೆಯಾಡೋಣವೇ? ಬಾರೆಲೆ ನಲ್ಲೆ!
ಉಯ್ಯಾಲೆಯಾಡೋಣವೇ? ॥ ಪಲ್ಲವಿ ॥

092178

೧

ಅಂಗಳದ ತುದಿಯಲ್ಲಿ ಮಾಮರದ ರೆಂಬೆಯಲಿ
ಜೋತಾಡುವುಯ್ಯಾಲೆಯದೊ ಕರೆಯುತಿಹುದು.
ನಿನ್ನ ಜೊತೆಯಿಲ್ಲದಿರಲದಕೆ ಬೇಸರವಂತೆ
ಇನ್ನೇಕೆ ತಡ? ಬಾರೆ! ಹೋಗೋಣ ಕಾಂತೆ!

೨

ಸಂಜೆಯಾ ಹೊಂಬಿಸಿಲು ಎಲೆಗಳಲಿ ನಲಿಯುತಿದೆ
ತಂಗಾಳಿ ಸವಿಯಾಗಿ ತೀಡಿ ಒಲಿಯುತಿದೆ
ಪಕ್ಷಿಗಳ ಕಲರವದ ಸಂಗೀತವಾಗುತಿದೆ
ನೀ ಬಾರದಿರಲೀಗ ಎಲ್ಲ ವ್ಯರ್ಥವಿದೆ.

೩

ಕಾದಂಬರೀ ಪಠನವಿದೆಯೆಂದು ಹೇಳುವೆಯ?
ರಾತ್ರಿಯೋದಲುಬಹುದು. ಪುಸ್ತಕವ ಮುಚ್ಚು.
ರವಕೆಯಂಚಿನ ಮೇಲೆ ಬಣ್ಣನೂಲಿನ ಲೀಲೆ
ಚಿತ್ರ ಶಿಲ್ಪದ ಹೆಣಿತ ಬಿಟ್ಟುಬಿಡು ಸಾಕು.

೪

ಹಿಂದು ಮುಂದಿನ ದುಃಖವನು ಮರವೆಕಡಲಿನಲಿ
ತೇಲಿಸುತ, ರಸನಿಮಿಷ ಸವಿಯೋಣ ಬಾ.
ಪ್ರೇಮವೊಂದೇ ಧರ್ಮ, ಸಂತೋಷವೇ ಮರ್ಮ.
ಚಿಂತೆಯನು ನೆನೆಯದಿರು. ನಲಿಯೋಣ ಬಾ.

ಉಯ್ಯಾಲೆಯಾಡೋಣವೇ? ಬಾರೆಲೆ ನಲ್ಲೆ!
ಉಯ್ಯಾಲೆಯಾಡೋಣವೇ?

# ರೋಗಿಯಾದ ಮಡದಿ

ಮರುಗದಿರು ಮನದನ್ನೆ!
ಸ್ವಸ್ಥಳಹೆ ಚೆನ್ನೆ!

೧

ಬಾಳಿನಾಗಸವೊಮ್ಮೆ ಶುಭ್ರವಿರಬಹುದು
ಮಗುದೊಮ್ಮೆ ನರಳಿಕೆಯ ಕಾರ್ಮೋಡ ಬರುದು
ಎರಡನೊಂದೇ ರೀತಿ ತಿಳಿವ ಸವಚಿತ್ತ
ಸಂಸಾರದಲಿ ತುಂಬಬೇಕಾದ ತತ್ವ.

೨

ತನ್ನ ಪತಿದೇವನಿಗೆ ತನ್ನ ಮಕ್ಕಳಿಗೆ
ಹೊತ್ತುಹೊತ್ತಿಗೆ ಊಟ ತಿಂಡಿಯಿಲ್ಲೆಂದು
ಅವರ ಸೇವೆಯು ಮಾಡಲಾರದಿಹೆನೆಂದು
ಬರಿದೇಕೆ ಕೊರಗುತಿಹೆ? ಬೇಡವಾ ಚಿಂತೆ.

೩

ಆರೋಗ್ಯ ಭಾಗ್ಯನಿನಗೊದಗಿ ಬರಲೆಂದು
ತುಂಬು ಬಗೆಯಲಿ ಹರಕೆಯಿಾಯುತಿಹೆನಿಂದು
ನಿನ್ನ ಮನದಾಳದಾ ನಲ್ಮೆಯರಿವಿಹುದು
ನಿನ್ನ ಆರೈಕೆಯಲಿ ಸಲ್ಲಿಸುವೆನದನು.

೪

ನಮ್ಮ ದಾಂಪತ್ಯದಲಿ ಕತ್ತಲೆಯು ತೊಲಗಿ
ಸವಿಸೊಗದ ಬಾಳ್ಬೆಳಗು ಬೇಗನೇ ಬೆಳಗಿ
ಬರಲಿರುವುದೆನ್ನುವಾಶಾವಾದವೆಮಗೆ
ದಾರಿ ತೋರಲಿ ಮುಂದೆ ಧ್ರುವ ತಾರೆಯಾಗೆ.

ಮರುಗದಿರು ಮನದನ್ನೆ!
ಸ್ವಸ್ಥಳಹೆ ಚೆನ್ನೆ!

# ನಲುಮೆಯು ನಲ್ಲ!

೧

ನಲುಮೆಯ ನಲ್ಲನೆ! ಪ್ರೇಮದ ಬೆಳೆಯನು
ಬಾಳಿನ ಬಯಲಲಿ ಬೆಳೆಯೋಣ!
ನೋವಿನ ವಿಷವನು ಹರುಷದ ಸುಧೆಯಲಿ
ತೇಲಿಸಿ ಮುಳುಗಿಸಿ ಮರೆಯೋಣ.

೨

ಒಲವಿನ ಹಾಲಿನ ಹೊಳೆಯಲಿ ಮೀಯುವ.
ಸಂತಸ ಕೆರೆಗಳಲೀಜೋಣ.
ಗೆಲವಿನ ನಂದನವನದೊಳಗಾಡುವ.
ಬೆಳಕಿನ ಸಗ್ಗದಿ ಕುಣಿಯೋಣ.

೩

ಹೂವಿಂ ಹೂವಿಗೆ ಹಾರುವ ಬಣ್ಣದ
ಚಿಟ್ಟೆಗಳಂದದಿ ನಲಿಯೋಣ.
ಹುರುಪಿನ ನಗೆಹೂ ಮೊಗದಲಿ ಚೆಲ್ಲಲಿ
ನಲವಿನ ಜೇನನು ಹೀರೋಣ.

೪

ಬಾಳಿನ ಬಳ್ಳಿಗೆ ಬಿಳಿ ಹೂ ಮೂಡಲಿ.
ಮೂಡಿದ ಹೂವಿಗೆ ಹಣ್ಣಿರಲಿ.
ಹಣ್ಣಿನ ಬೆಳೆಯಲಿ ಭಾವೀ ಜೀವನ
ಧನ್ಯತೆ ಪಡೆಯಲಿ ಹದುಳದಲಿ.

೫

ಗೋಳಿನ ಬಾಳಿನ ದುಗುಡದ ಬೀಳು
ಸೋಲನು ಪಡೆಯಲಿ ನಾಶದಲಿ.
ಬಾಳುವೆಯೆಲ್ಲಾ ಹಸುರಿನ ಹಂದರ-
ವಾಗಲಿ ಚಿಗುರಲಿ ನಗುತಿರಲಿ.

೬

ಬಾಳಿನ ಬೆಳಕೇ! ಪ್ರೇಮದ ಹೊಳಕೇ!
ನವಿಮ್ಮಾರ್ವರ ಎದೆಯೊಂದಿರಲಿ.
ನಲವಿನ ಕಣ್ಣೇ! ಒಲವಿನ ಹಣ್ಣೇ!
ಪ್ರೇಮಕೆ ಸಂತತ ಗೆಲವಿರಲಿ!

# ದುಃಖ ರಾತ್ರಿ

೧

ದೂರದೂರಿನ ಪಯಣದಿಂದಲಿ
ಬಾರನೇಕೆ ಸಖ?
ನನ್ನ ಬಾಳಿನ ನೋವು-ಸಂತಸ
ನೋಳ್ಪುದವನ ಮುಖ.
'ಬರುವೆ ಕಂಡಿತ'ವೆಂದು ಹೇಳಿದ
ಸೊದೆಯನೂಡುವ ಮಧುರನಾದ
ತುಂಬಿ ಸರದಂತುಲಿಯುತಿರುವುದು
ನನ್ನ ಕಿವಿಯಲ್ಲಿ.
ಈಗಲೂ ಜೊನ್ನವನು ಸುರಿವುದು
ನನ್ನ ಬಗೆಯಲ್ಲಿ.

೨

ಹಾಸುಬಟ್ಟೆಯ ಹೊದೆವ ಪಟ್ಟೆಯ
ತೊಳೆದು ತಂದಿರುವೆ.
ತಲೆಯ ದಿಂಬಿಗೆ ನೂಲು ಹೂವಿನ
ಕುಸುರಿ ನೆಯ್ದಿರುವೆ.
ಮಲಗುಮಂಚದಿ ಬಿಳಿಯ ಹಾಸಿಗೆ
ಸಿದ್ಧವಾಗಿದೆ ನಲ್ಲ ಬರವಿಗೆ.
ಇನ್ನು ಇನ್ನೂ ತಡೆವನೇತಕೊ
ನನ್ನ ನಲ್ಗೆಳೆಯ?
ಹೊತ್ತು ಮೀರಿತು ಬಾರನೇನೋ
ನನ್ನ ಬಾಳ್ಗೆಳೆಯ?

೩

ಅವನೆ ಮುಡಿಸಲಿ ನನ್ನ ತುರುಬಿಗೆ
ಎಂಬ ತವಕದಲಿ
ಜಾಜಿ ದಂಡೆಯ ಸೂಡದೇ ಮಡ
ಗಿರುವೆ ನಾನಿಲ್ಲಿ.

ಕಪಿಲೆ ಕರೆದಿಹ ನೊರೆಯ ಹಾಲನು
ಬೆಳ್ಳಿ ಲೋಟಗೆ ಕಾಸಿ ಎರೆದೆನು
ಬಾಡಿ ಹೋಗುವುದೇನೊ ಹೂವಿನ
ಮಾಲೆ? ಸಖನಿಲ್ಲ.
ಹಳಸಿ ಹುಳಿಯುವುದೇನೊ ಕಾಸಿದ
ಹಾಲು? ಪ್ರಿಯನಿಲ್ಲ.

❦

ತಂತಿಯನು ಬಿಗಿಕಟ್ಟಿ ವೀಣೆಯ
ಸಿದ್ಧವಿಟ್ಟಿರುವೆ.
ಬೇಟ-ಕೂಟದ ಪ್ರಣಯ ಗೀತವ
ಕಟ್ಟಿ ಕಾದಿರುವೆ.
ಎಲ್ಲವೂ ಬರಿದಪ್ಪುದೇನೊ?
ಮಳಲಿಗೆರೆದಿಹ ನೀರೊ ಏನೊ?
ಊದುಬತ್ತಿಯ ಹೊಗೆಯು ಪರಿಮಳ-
ವೀಯೆ ಕಾದಿಹುದು.
ಹೂವಿನೆಣ್ಣೆಯು ನಲ್ಲನಣ್ಪಿಗೆ
ಸಿದ್ಧವಾಗಿಹುದು.

❦

ತೋಳ ತಳ್ಕೆಯು ತೆರವು ಕಾದಿದೆ
ನಲ್ಲನಪ್ಪುಗೆಗೆ.
ಮಿರುಗು ಕೆನ್ನೆಯು ನುಣುಪುಗೊಂಡಿದೆ
ಮುತ್ತಿನೊತ್ತಿಗೆಗೆ.
ಕಣ್ಣ ನೀರನು ಕರೆವುದೊಂದೇ
ನನ್ನ ಪಾಲಿಗೆ ಬಂದುದಿಂದೇ.
ನಲ್ಲನಿಲ್ಲದೆ ಶೂನ್ಯವಾಗಿದೆ
ನನ್ನ ಹೃದಯವಿದು
ಮೆಲ್ಲಮೆಲ್ಲನೆ ಸಮಯ ಸರಿವುದು
ದುಃಖ ರಾತ್ರಿಯಿದು.

---

# ವಿರಹಿಣಿ

೧

ಮೊಗದಲ್ಲಿ ನಗೆಯಿಲ್ಲ;
    ಕಣ್ಣಲ್ಲಿ ಕಳೆಯಿಲ್ಲ
ಸೊಗದ ಲವಲವಿಕೆಯದು ಹೃದಯದೊಳಗಿಲ್ಲ.

೨

ತಲೆಯು ಬೈತಲೆಯಲ್ಲಿ
    ಉಟ್ಟಿರುವ ಬಟ್ಟೆಯಲಿ
ಸಲೆಮನವ ಸೆಳೆಯುತಿಹ ಸುವಿಲಾಸವಿಲ್ಲ

೩

ಬಿಸಿಯಉಸಿರ ಸುಯ್ಯುವಳು
    ಕಂಡಲ್ಲೆ ಕಾಣುವಳು
ಬಸಿವ ಕಂಬನಿಯನ್ನು ನೆರೆತೊಡೆಯುತಿಹಳು

೪

ಆರೇನ ಕೇಳಿದರು,
    ಮಾತಿಲ್ಲ. ಚಿಂತೆಯುರು-
ಕಾರಣವನೊರೆಯಳೊಂದಿನಿತಾದರೂ.

೫

ಜೀವ ಧಾರಣೆಗೆಂದು
    ಆಹಾರವನು ತಿಂದು,
ಸಾವ ಸಮಯ ನಿರೀಕ್ಷೆಗೈವ ತೆರವಿಹಳು.

೬

ಶೂನ್ಯತೆಯ ರೂಪಾಂತ
    ಚೇತನಾತ್ಮಕ ಯಂತ್ರ
ಧ್ಯಾನವನ್ನಭ್ಯಾಸ ಮಾಳ್ಪವೋಲಿಹಳು.

೭

ವಿರಹಿಣಿಯು ಇವಳಿಂದು
    ಒಲವಿನಾ ಪತಿಯಂದು
ಪರಿಣಯದ ಮರುದಿನವೆ ನಾಡನುಳಿದಿಹನು.

---

# ಪ್ರೇಮಾಂಜಲಿ

೧

ಸಂಜೆಯಾಯಿತು; ರಾಗವಾಗಸವನಾವರಿಸಿ
ರಂಜಿಸಿದ ತೆರದಲ್ಲಿ ನನ್ನೆದೆಯಲಿ
ಅನುರಾಗವಿಡಿದಿಹುದು. ತಿಳಿಯಲಾರೆಯ ನೀನು?
ಮನವು ತವಕಿಸುತಿಹುದು. ಬರಲಾರೆಯಾ?

೨

ನಿಮಿಷಗಳು ಗಳಿಗೆಗಳು ಕಾಲನಾಳದೊಳಿಳಿದು
ಸಮವಾಗಿ ಸರಿಯುತಿವೆ. ನಿನ್ನ ಸೇರುವೆಯು
ಸಮನಿಸದೆ ಸಮಯವದು ಶೂನ್ಯತೆಯನಾನುವುದು
ಪ್ರೇಮಕನಿತಾದರೂ ತಾಳ್ಮೆಯಿದೆಯೇ?

೩

ಕಾಳಿಂದಿ ಸವಿಸರದಿ ಸಂಜೆಗಾಯನವನ್ನು
ಹೇಳುತ್ತ, ಹೊತ್ತನ್ನು ವ್ಯರ್ಥವಾಗಿ
ಹಾಳು ಮಾಡದೆ, ಮೆಲ್ಲಮೆಲ್ಲನೇ ಹರಿಯುವಳು
ಹೇಳು— ನೀನೇಕಿಂತು ಕಾಲಗಳೆವೆ?

೪

ಕೆಲವು ಸುಮಗಳ ಕೋದು ಸರವ ಸುರಿದಿಹೆನಿಂದು
ಗೆಲವಿನೊಲವಿನ ಕಾಣ್ಕೆಯಿದನು ನೀನು
ಕೊಳ್ಳು ಬೇಗನೆ ಬಂದು; ಕೊಳ್ಳದಿರಲಾ ಮಾಲೆ
ಕಳೆಗುಂದಿ ಕೊರಕೊರಗಿ ಸೊರಗದೇನು?

೫

ನಿನ್ನ ಸವಿಗೊಳಲಿನಾ ಗೀತೆಯನ್ನಾಲಿಸಲು
ನನ್ನ ಈ ಕಿವಿಯಿಂದು ತವಕಿಸುವುದು.
ನಯನಮೋಹನ ದೇಹ ಶೋಭೆಯನು ದಿಟ್ಟಿಸಲು
ಬಯಸುವುವು ಕಣ್ಣುಗಳು. ಬರಲಾರೆಯಾ?

೧

ಬಗೆಯ ನಲ್ಮೆಯ ನಿಧಿಯೆ! ನನ್ನ ಬಾಳಿನ ಬೆಳಕೆ!
ಸೊಗದ ಸನ್ಮೂರ್ತಿಯೇ ಬಾರೆಯೇನು?
ಹೇ ಪವಿತ್ರ ಪ್ರೇಮಮಯನೆ! ಕರುಣಾಳುವೇ!
ತಾಪವನು ತಿಳಿಯೆಯಾ ಹೆಂಗರುಳಿನ?

೨

ಹೇ ನಲ್ಲ! ನೀನಾವ ತಾಣದೊಳಗಿದ್ದರೂ,
ನನ್ನೆದೆಯು ನಿನ್ನೆದೆಯೊಳೈಕ್ಯವಾಗಿಹುದು.
ಬೇಡುವೆನು—ನಿನ್ನ ವಿಮಲ ಪ್ರೇಮ ನನ್ನಲ್ಲಿ
ಕೂಡಿರಲಿ! ನಿನಗಿದೋ ಪ್ರೇಮಾಂಜಲಿ!

---

# ಮಗು

೧

ಸತಿ-ಪತಿಯರೆದೆಯೊಲವಿನೊಂದು ತಿಳಿನೀರಿಂದ
ಬೆಳೆದೆರಡು ಬಾಳ್‌ಬಳ್ಳಿಗೊಂದು ಸಿರಿಹೂವು.
ಇಬ್ಬರನು ಸಮವಾಗಿ ಸಂಪ್ರೀತಿಗೊಳಿಸುತ್ತ,
ತೊಡೆಯುವುದು ಬಾಳ ಜಂಜಡದ ಬಿರುನೋವು.

೨

ಕೈಗಳನು ಮುಚ್ಚಿರುವ ಭದ್ರಮುಷ್ಟಿಯು ಬಿಡಿಸೆ
ಕಿರುನಗೆಯು ಮೊಗದಲ್ಲಿ ಕೇವಣಿಪುದು.
ನೋವಿನರಿವಿಲ್ಲದೆಯೆ ಕಾಲುಗಳ ಬಡಿವಾಗ
ಹಿಡಿದಿಡಲು ಹೂನಗೆಯು ಹೊಸೆಯಿಸುವುದು.

೩

ಹಣೆಯಿಂದ ಮುಂಗುರುಳನತ್ತ ನೇವರಿಸಿದರೆ
ಸುಮ್ಮನೇ ತಲೆಯುನಲ್ಲಾಡಿಸುವುದು.
ನೋಡಿಯೆತ್ತದೆ ಸರಿಯೆ, 'ಎತ್ತಿಕೋ' ಎಂಬಂತೆ
ಬರಿದೆ ಹಟದಲಿ ಚಂಡಿಹಿಡಿದಳುವುದು.

೪

ಹೊಳೆವ ಕಣ್ಣಳ ನೋಡಿ, ಕೆನ್ನೆಗಳಿಗೊಂದೆರಡು
ಮುತ್ತನಿಟ್ಟರೆ ಮುದ್ದುನಗೆಯು ಬೀರುವುದು.
ತಂದೆಯೆತ್ತಿರುವಾಗ ತಾಯಿ ಹತ್ತಿರ ಬರಲು
ಅವಳೆಡೆಗೆ ಮೊಗ ಚಾಚಿ ತೋಳುನೀಡುವುದು.

---

# ಸಾರ್ಥಕತೆ

೧

ನನ್ನ ಪುರುಷಾಯುಷ್ಯದಲಿ ಕಾಲು ಶತಮಾನ
ದಾಟುತಿರೆ ನನ್ನಾಕೆ ಬಂದು ಕೈವಿಡಿದು
ಮನೆಯನ್ನು ಮನವನ್ನು ನಗುವಿಂದ ಬೆಳಗಿಸುತ
ಬಾಳ ಹಸುರಾಗಿಸಿದಳೊಲವಿನಲಿ ಕೋದು.

೨

ಶೃಂಗಾರ ಕವನಗಳಿಗವಳೆ ಸ್ಫೂರ್ತಿಯು ಬುಗ್ಗೆ
ಎಂದೊಪ್ಪಿಕೊಂಡರೇಂ ನಗುವಿಗೆಡೆ ಬಂತೇ?
ಅವುಗಳನು ನಾನೋದಿ ಹೇಳಿದರೆ, ಅವಳ ಮೊಗ
ಲಜ್ಜೆಯಲಿ ಕೆಂಪಾಗಲದುವೆ ಸಾರ್ಥಕತೆ.

---

# ಸಮರ್ಪಣ

ತುಂಬಿದೊಲವಿನ ಭರದಿ ಬಾಳ್ವೆಯ
ಮಡಿಲೊಳೊಬ್ಬರನೊಬ್ಬರು
ತಿಳಿದುಕೊಳ್ಳುತ, ಸಹನೆಯಿಂದಲಿ
ಸಾಮರಸ್ಯವ ಸಾಧಿಸಿ,
ಬೆರೆತ ದಂಪತಿಗಳಿಗೆ ನನ್ನೀ
ಪುಟ್ಟ ಕೃತಿಯು ಸಮರ್ಪಣ.
ಪ್ರೇಮ-ತೃಪ್ತಿಯ, ಶಾಂತಿ-ಸೌಖ್ಯದ
ಪ್ರೇಮಿಗಳಿಗಿದು ದರ್ಪಣ.



# ಸಾಹಿತ್ಯಾಂಜಲಿ ಗ್ರಂಥಮಾಲೆ

## ಉದ್ದೇಶ

ಶುಚಿ-ರುಚಿಯಾದ ಸುರಸ ಸಾಹಿತ್ಯ ಸೃಷ್ಟಿ. ಸಾಹಿತ್ಯದಲ್ಲಿ ಮೇಲ್ಮಟ್ಟವನ್ನೂ ಸದಭಿರುಚಿಯನ್ನೂ ಕಾಯ್ದುಕೊಳ್ಳುವುದು.

## ನಿಯಮ

ಕಂತುವೊಂದರ ಚಂದಾ ಹಣ 25 ರೂಪಾಯಿ ಕೊಟ್ಟು ಚಂದಾದಾರರಾದವರಿಗೆ 35 ರೂಪಾಯಿ ಬೆಲೆಯ ಪುಸ್ತಕಗಳನ್ನು ಸಲ್ಲಿಸುವುದು.

## ನಮ್ಮ ಈ ವರೆಗಿನ ಪ್ರಕಟಣೆಗಳು

| | | | | | | |
|---|---|---|---|---|---|---|
| ೧. | ಕನ್ನಡ ಕುಮಾರಸಂಭವ (ಅಮ್ಮೆಂಬಳ) | 1 | 4 | 0 | ಮುಗಿದಿದೆ |
| ೨. | ಸರ ( ,, ) | 1 | 12 | 0 | " |
| ೩. | ಪ್ರಣಯ ದರ್ಶನ ( [illegible] ) | 1 | 8 | 0 | ಉಂಟು |
| ೪. | ಪದ್ಮರಾಗ (ಸೋಮಯಾಜಿ) | 1 | 8 | 0 | ತೀರಿದೆ |
| ೫. | ದುಂಡುಮಲ್ಲಿಗೆ (ಅನಂತಯ್ಯ) | 0 | 10 | 0 | ,, |
| ೬. | ರಾಮಾಶ್ವಮೇಧ ಕಥೆ (ಅಮ್ಮೆಂಬಳ) | 0 | 12 | 0 | ,, |
| ೭. | ರಾಜಸೂಯಾಧ್ವರ (ಸೋಮಯಾಜಿ) | 1 | 4 | 0 | " |
| ೮. | ಗದಾಯುದ್ಧದ ಸಾರ ( ,, ) | 1 | 0 | 0 | " |
| ೯. | ಬಾಳ ಗೆಳತಿ (ಅಮ್ಮೆಂಬಳ) | 0 | 12 | 0 | " |
| ೧೦ | ಬೆಳಕು | 30.00 | | | |
| ೧೧. | ದೇವರು ಶ್ರೀ ದಾ ಶ ಸ್ವರೂಪ | 5.00 | | | |

# ಪುರಾಣಿಕ ಸೋದರಿಯರ

## ಅಮ್ಮೆಂಬಳರ ಕೃತಿಗಳು

೧. ಕನ್ನಡ ಕುಮಾರ ಸಂಭವ

೨. ಸರ (ಕವನ ಸಂಕಲನ)

೩. ಪ್ರಣಯ ದರ್ಶನ (ನಾಟಕ ಸಂಕಲನ)

೪. ಶ್ರೀರಾಮಾಶ್ವಮೇಧ ಕಥೆ

೫. ಬಾಳ ಗೆಳತಿ

# ಕೃತಜ್ಞತೆ

ಈ ಪುಸ್ತಕದ ಮುದ್ರಣಕ್ಕೆ ಆರ್ಥಿಕ ಸಹಾಯವಿತ್ತವರು.

೧. ಪಿ. ಎಸ್. ನಾರಾಯಣ ಕಾರಂತ

೨. ಏರ್ಯ ಲಕ್ಷ್ಮೀನಾರಾಯಣ ಆಳ್ವ

೩. ವಾಸುದೇವ ಪಟ್ಟೇರಿ, ಕಾವುಮಠ

೪. ಬಿ. ಪದ್ಮನಾಭ ಸೋಮಯಾಜಿ

೫. ಕೊಡಕಲ್ಲು ನಾರಾಯಣ ಭಟ್ಟ

೬. ಕೆ. ಶ್ರೀನಿವಾಸ ಭಂಡಾರಿ, ಪಟೇಲ್

೭. ಪಿ. ಗುರುರಾಜ ರಾವ್

೮. ಕೊಳಕೆ ರಾಮಕೃಷ್ಣ ಮಯ್ಯ

೯. ಪಿ. ಶೀನ ಪೂಂಜ

೧೦. ಎಡ್ವಿನ್ ಡಿ'ಸೋಜ

# ಕವಿಯ ಕುರಿತು



ದಕ್ಷಿಣ ಕನ್ನಡದ ತರುಣ ಕವಿಗಳಲ್ಲಿ ಅಮ್ಮೆಂಬಳ ಶಂಕರನಾರಾಯಣ ನಾವಡರು ವಿಶಿಷ್ಟ ಸ್ಥಾನವನ್ನು ಪಡೆದಿರುವರು.

ಇವರ **"ಕನ್ನಡ ಕುಮಾರ ಸಂಭವ"** ಕಾವ್ಯವು ಕವಿ ಕಾಳಿದಾಸನ ಕಾವ್ಯ ಮಾಧುರ್ಯವನ್ನು ಸವಿಯಲು ಸರಳವಾದ ಕೈಗನ್ನಡಿಯಾಗಿದೆ. ಇದರ ಕುರಿತು ಶ್ರೀ. ಮಂಜೇಶ್ವರ ಗೋವಿಂದ ಪೈಗಳು—". . . . . . ಕಾಳಿದಾಸನ ಕಾವ್ಯಗಳು ಸುಬೋಧವಾಗಿವೆಯಾದರೂ, ಈ ಅನುವಾದವು ಮತ್ತೂ ಸುಗಮವಾಗಿದೆ. ಇದರ ರಚನೆ ಸೊಗಸಾಗಿದೆ." ಎಂಬ ಅಭಿಪ್ರಾಯವನ್ನಿತ್ತಿರುವರು.

ಇವರ ೫೧ ಕವನಗಳು **"ಸರ"** ಎಂಬ ಹೆಸರಿನಿಂದ ಧಾರವಾಡದ ಸಾಧನ ಪ್ರಕಟನಾಲಯದಲ್ಲಿ ಪ್ರಕಟವಾಗಿವೆ. ಇದರ ಕುರಿತು ಶ್ರೀ. ದ. ರಾ. ಬೇಂದ್ರೆಯವರು ". . . . . . ಎಲ್ಲ ಕವನಗಳಲ್ಲಿಯೂ ಕವಿಯ ಪ್ರಾಮಾಣಿಕತೆ, ಸಹಜತೆ, ಪ್ರಸಾದ, ಪ್ರಯತ್ನಗಳ ಲಕ್ಷಣವಿದೆ. ಅವರಲ್ಲಿ ಸಹಜಶಕ್ತಿಯಿದೆ. ಇವರ ಕವನಗಳಿಗೆ ಒಂದು ಸಹಜತೆಯ ಒಪ್ಪಬಂದಿದೆ. ನನಗೆ ವಿಶೇಷವಾಗಿ ಅವರ ಶೃಂಗಾರಾತ್ಮಕ ಕವನಗಳು ಪ್ರಿಯವಾಗಿ ತೋರಿದವು. ಅವರ ನಿಸರ್ಗ ಪ್ರೇಮವು ಪ್ರಾಮಾಣಿಕವಾಗಿದೆ." ಎಂಬುದಾಗಿ ಬರೆದಿರುವರು.

ಇವರ **"ಪ್ರಣಯ ದರ್ಶನ"**ವು ಮೂರು ಗೀತ ನಾಟಕಗಳ ಸಂಕಲನವಾಗಿದೆ. ಇದರಲ್ಲಿ ಅಶೋಕಕುನಾಲ ತಿಷ್ಯರಕ್ಷಿತೆಯರಿಗೆ ಸಂಬಂಧಿಸಿದ "ಮೋಹಾಂಧೆ" ಯೆಂಬ ನಾಟಕದ ಕುರಿತು ಶ್ರೀ. ಬೆಟಗೇರಿ ಕೃಷ್ಣ ಶರ್ಮರು—"ವಸ್ತು ಚಮತ್ಕೃತಿ, ಪಾತ್ರಪರಿಪುಷ್ಟಿಗಳ ಮೂಲಕ ಬಹುಜನರ ಮನಸ್ಸನ್ನಿದು ಹಿಡಿದು ನಿಲ್ಲಿಸಬಲ್ಲುದು" ಎಂಬ ಅಭಿಪ್ರಾಯವನ್ನೂ ಕೊಟ್ಟಿರುವರು.

ಇವರ ನಾಲ್ಕನೆಯ ಪುಸ್ತಕವೇ **"ಶ್ರೀ ರಾಮಾಶ್ವಮೇಧ ಕಥೆ"**. ಇದು ಮುದ್ದಣ ಮಹಾಕವಿಯ ಹಳೆಗನ್ನಡ ಗದ್ಯ ಕಾವ್ಯವನ್ನು ಅವನ ಮಾತುಗಳಿಂದಲೇ ಹೊಸಗನ್ನಡಿಸಿದ ಸಂಗ್ರಹಾನುವಾದ–ರಸಕೃತಿಯಾಗಿದೆ.

ಈ **"ಬಾಳ ಗೆಳತಿ"**ಯು ಶೃಂಗಾರ ರಸ ಸ್ಯಂದಿಯಾದ ಪ್ರೇಮಗೀತಗಳ ಒಂದು ಉತ್ಕೃಷ್ಟ ಸಂಕಲನವಾಗಿದೆ. "ಮೈಸೂರು ಮಲ್ಲಿಗೆ"ಯು ರಸಿಕ ಮನೋಹ್ಲಾದಿಯಾಗಿ ಪರಿಣಮಿಸಿದಂತೆ, ಈ "ಬಾಳ ಗೆಳತಿ"ಯು 'ಮಂಗಳೂರು ಮಲ್ಲಿಗೆ' ಯಾಗಿ ರಸಿಕರಿಗೆ ಪರಿಮಳದ ಔತಣವನ್ನು ಉಣ್ಣಿಸಬಹುದೆಂದು ಗೆಳೆಯರು ಅಭಿಪ್ರಾಯವಿತ್ತಿರುವರು.